# ಮಹದುಪಕಾರ ಸ್ಮರಣೆ.



ಹೈದರಾಬಾದು (ದಕ್ಷಿಣ) ಕರ್ನಾಟಕ ಶಿಕ್ಷಣ ಸಮಿತಿಯ ಅಧ್ಯಕ್ಷರಾದ
**ಶ್ರೀಮಾನ್ ವೇ|| ಮಾನ್ಯ ಪಂಡಿತ ಜಿ. ರಾಮಾಚಾರ್**
ಆಬಿದ್ ರೋಡ ಹೈದರಾಬಾದು ದಕ್ಷಿಣ.

ಈ ಮಹನೀಯರು ನಮ್ಮ ಹರಿದಾಸ ಸಾಹಿತ್ಯದ ೨೭ ಗ್ರಂಥಗಳು ಅವಲೋಕನೆಗೈದು ಬಹು ಸಂತುಷ್ಟರಾಗಿ ನಮ್ಮ ಬೇಡಿಕೆಯನ್ನು ಮನ್ನಿಸಿ ಶ್ರೀ ಗುರುರಾಜರು ಪ್ರೇರಿಸಿದಂತೆ ವಿಶಾಲಹೃದಯದಿಂದ ಹರಿದಾಸಸಾಹಿತ್ಯ ಮಾಲೆ ಮತ್ತು ಸುಳಾದಿಗಳ ಪ್ರಕಟನೆಗೆ ಎರಡು ಸಾವಿರ ರೂಪಾಯಿ (ಹಾಲಿ) ಉದಾರ ದೇಣಿಗೆಯನ್ನಿತ್ತಿರುವ ಮಹದುಪಕಾರ ಸ್ಮರಿಸಿ ಪ್ರಣಾಮಗಳನ್ನರ್ಪಿಸಿ ಅಭಿನಂದಿಸುತ್ತೇವೆ. ಮತ್ತು ಶಿಕ್ಷಣ ಸಮಿತಿಯ ಕಾರ್ಯದರ್ಶಿಗಳ ಮತ್ತು ಸದಸ್ಯರ ಆಭಾರ ಮನ್ನಿಸುತ್ತೇವೆ.

ಮತ್ತು ಈ ಮಹನೀಯರ ಆಜ್ಞೆಯಂತೆ ಶ್ರೀ ಗುರುರಾಜರ ಸ್ತೋತ್ರಗಳನ್ನು ಅಚ್ಚುಮಾಡಿಸಿದೆ. ಮುಂದೆ ಹರಿದಾಸ ಸಾಹಿತ್ಯಮಾಲೆ ಮತ್ತು ತೀರ್ಥಕ್ಷೇತ್ರ ಮಹಿಮಾ ಪದಸುಳಾದಿಗಳ ಅಚ್ಚಿನಕಾರ್ಯ ಪ್ರಾರಂಭಿಸಲಿದೆ.

ಈ ಮಹತ್ಕಾರ್ಯದಲ್ಲಿ ಬಹು ಶ್ರಮಪಟ್ಟು ಮಹಾಭಕ್ತಿಯಿಂದ ತೀರ್ಥಕ್ಷೇತ್ರ, ಸಾಧನಭಾಗ, ಪ್ರಮೇಯೋಪಾಸನ, ಸ್ತೋತ್ರಭಾಗ ಸುಳಾದಿಗಳ ಅಚ್ಚಿನ ಪ್ರತಿಯನ್ನು ಬರೆದುಕೊಟ್ಟ ಹಿರಿಯರಾದ ಶ್ರೀ ಮ.ರಾ.ಶ್ರೀ ಶೇಷಗಿರಿರಾವ ಬಾಗಲಕೋಟ ಮುಕ್ಕಾಂ ಕರ್ಡಕಲ್ಲ ತಾ. ಲಿಂಗಸುಗೂರ ಇವರಲ್ಲಿ ಕೃತಜ್ಞತೆಪೂರ್ವಕ ಅನೇಕ ವಂದನೆಗಳು.

**ಹನುಮಂತರಾವ ವಕೀಲ, ಗೊರಬಾಳ ಸಂಚಾಲಕ.**
ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸುಗೂರು.

|| ಹರಿಃ ಓಂ ||

ಶ್ರೀರಾಮ ನರಹರಿ ಕೃಷ್ಣ ಕೃಷ್ಣಾಯನಮಃ.



# ಶ್ರೀ ರಾಘವೇಂದ್ರ ಗುರುಸಾರ್ವಭೌಮ

ಅಪರೋಕ್ಷ ಜ್ಞಾನಿಗಳಿಂದ ರಚಿತ

ಶ್ರೀ ಮಂತ್ರಾಲಯ ಪ್ರಭುಗಳ

ಸ್ತೋತ್ರಗಳು (೩) ಪದಗಳು (೧೩೪) ಸುಳಾದಿಗಳು (೭)

ಪುಟ (೧೫೭)

---

ಬೆಲೆ ಚಂದಾದಾರರಿಗೆ ಮಾತ್ರ ೧—೦

ಇತರರಿಗೆ ೧—೪—೦.

**श्री राघवेंद्रगुरु सार्व भौम**



मूकोऽपि यत्प्रसादेन मुकुन्द शयनायते
राजराजायते रिक्तो राघवेंद्रं तमाश्रये

॥ ಶ್ರೀ ಗುರುಭ್ಯೋನಮಃ ॥

# ಮುನ್ನುಡಿ

ಶ್ರೀಗುರು ಸಾರ್ವಭೌಮ ಶ್ರೀರಾಘವೇಂದ್ರ ಶ್ರೀಪಾದಂಗಳವರು ಮಂತ್ರಾಲಯದಲ್ಲಿ ವೃಂದಾವನಸ್ಥರಾಗಿದ್ದರೂ ಅನೇಕಜನ ಭಕ್ತಾದಿಗಳಿಗೆ ಅವರು ಪ್ರತ್ಯಕ್ಷವಾಗಿ ಇದ್ದಾರೆ ಎಂಬ ಅನುಭವವಾಗಿದೆ. ಅವರ ಮಹಾತ್ಮ್ಯೆ ಅಪಾರವಾಗಿದೆ, ನಿತ್ಯ ನವೀನವಾಗಿದೆ. ನೂರಾರು ಜನ ಯಾತ್ರಿಕರು ದಿನಾಗಲೂ ಅವರ ದರ್ಶನಾರ್ಥವಾಗಿ, ಸೇವೆಗಾಗಿ ಈಗಲೂ ಬರುತ್ತಲೇ ಇರುತ್ತಾರೆ. ಆರ್ತರು, ಮುಮುಕ್ಷುಗಳು, ಐಹಿಕ, ಆಮುಷ್ಮಿಕ ಸುಖಾಪೇಕ್ಷೆಯಿಂದ ಅವರ ಸನ್ನಿಧಿಯನ್ನು ಆಶ್ರಯಿಸುತ್ತಾರೆ. ಅವರ ದಿವ್ಯ ಪ್ರಭಾವದಿಂದೆ, ಮಹಿಮಾ ವಿಶೇಷದಿಂದ, ಕರುಣಾ ಕಟಾಕ್ಷದಿಂದ ಅನಿವಾರಿತವಾದ ಎಷ್ಟೋ ವ್ಯಾಧಿಗಳು, ಮಹಾರೋಗಗಳು ಪರಿಹಾರವಾಗಿವೆ. ಈಗಲೂ ಆಗುತ್ತಿವೆ. ಕುರುಡರು ಕಣ್ಣು ಪಡೆವುದು, ಮೂಕರು ವಾಗ್ಮಿಗಳಾಗುವುದು, ಹೆಳವರು ಕಾಲುಬಂದು ನಡೆವಂತಾಗುವುದು, ಭೂತ, ಪ್ರೇತ, ಪಿಶಾಚಿಗಳ ಉಚ್ಚಾಟನವಾಗುವುದು, ಸಂತಾನ, ಸಂಪತ್ತು, ವಿದ್ಯಾಪ್ರಾಪ್ತಿಯಾಗುವುದು ಬರಿಯ ಕೇಳಿದ ಕಟ್ಟುಕತೆಯಲ್ಲ, ಯಥಾರ್ಥವಾದ, ಅನುಭವವೇದ್ಯವಾದ ಸಂಗತಿಯಾಗಿದೆ. ಆಬಾಲವೃದ್ಧರು, ಪಂಡಿತ ಪಾಮರರು, ದರಿದ್ರರು, ಭಾಗ್ಯವಂತರು ಹೀಗೆ ಮಾನವ ಜಾತಿಯ ಎಲ್ಲ ಪಂಗಡದವರನ್ನೂ ಅವರವರ ಮತ, ಧರ್ಮ, ಕುಲ ಗೋತ್ರಗಳನ್ನು ಪರಿಗಣಿಸದೆ ತಮ್ಮನ್ನು ಓಲಗಿಸಿದ ಮಾತ್ರದಿಂದಲೇ ಸಮಾನವಾಗಿ ಅನುಗ್ರಹಿಸುತ್ತಾರೆ ಈ ಕರುಣಾಮೂರ್ತಿಗಳು. ಪಾಪಗಳು ಹೆಚ್ಚಾಗಿ, ಮನಃ ಪ್ರಾಯಶ್ಚಿತ್ತದಿಂದ ಶರಣಾಗತರಾದವರನ್ನು ನೋಡಿ ಅವರು ಹೆಚ್ಚು ಮರುಕಗೊಂಡು ಮಕ್ಕಳ ತಪ್ಪನ್ನು ತಾಯಿ ಮನ್ನಿಸುವಂತೆ ಮನ್ನಿಸಿ ಅವರಿಂದ ಸೇವೆಯನ್ನು ಸ್ವೀಕರಿಸಿ ಪವಿತ್ರರನ್ನಾಗಿ ಮಾಡುತ್ತಾರೆ. ಇಂಥ

ಮಹಿಮಾ ಪುರುಷರ, ಪುಣ್ಯ ಶ್ಲೋಕರ ನಾಮಸ್ಮರಣ, ಧ್ಯಾನ, ವಂದ ನಾದಿಗಳಿಂದ ಎಂಥವರಾದರೂ ಪುನೀತರಾಗುತ್ತಾರೆ, ಧನ್ಯರಾಗುತ್ತಾರೆ, ಉದ್ಧಾರವಾಗುತ್ತಾರೆ. ಇವರನ್ನು ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ ಎಂದು ಸ್ತುತಿಸಿರುವುದು ಉತ್ಪ್ರೇಕ್ಷೆಯಲ್ಲ. ಇವರಿಗೆ "ರಾಯರು" ಎಂಬ ಅತ್ಯಂತ ಪ್ರೀತಿದ್ಯೋತಕವಾದ ಹೆಸರು ಹೆಚ್ಚು ರೂಢಿಯಲ್ಲಿ ಬಂದಿದೆ.

ರಾಯರ ಸಮಕಾಲವನರಾದ ಶ್ರೀ ಅಪ್ಪಣಾಚಾರ್ಯರು ರಾಯರ ಮಹಿಮೆಯನ್ನೂ, ಗುಣ ವಿಶೇಷಗಳನ್ನೂ ಸ್ತೋತ್ರ ರೂಪವಾಗಿ ಸಂಸ್ಕೃತ ದಲ್ಲಿ ಕೊಂಡಾಡಿದ್ದಾರೆ. ಇದೇ ಶ್ರೀ ರಾಘವೇಂದ್ರ ಸ್ತೋತ್ರ. ಇದು ಬರಿಯ ಸ್ತೋತ್ರವೇ ಅಲ್ಲ, ಮಂತ್ರವೂ ಆಗಿದೆ. ಮಹಾ ಮಂತ್ರಗಳ ಲ್ಲಿರುವ ಸಕಲ ಸಿದ್ಧಿ ಪ್ರದಾಯಕವಾದ ಮಹಾ ಸಾಮರ್ಥ್ಯ ಈ ಮಂತ್ರದಲ್ಲಿ ಅಡಕವಾಗಿದೆ. ಈ ಮಂತ್ರೋಚ್ಚಾರ ಮಾತ್ರದಿಂದ ವಾಕ್‌ಸಿದ್ಧಿಯೂ, ದಿವ್ಯ ತೇಜಸ್ಸೂ, ಮಹಾ ಪ್ರಭಾವವೂ ಲಭಿಸುತ್ತಿರುವುದು ಅನುಭವದ ಮಾತಾಗಿದೆ. ಈ ಸ್ತೋತ್ರವು ಸಂಸ್ಕೃತದಲ್ಲಿದೆ. ಕನ್ನಡದಲ್ಲಿ ಶ್ರೀ ವಿಜಯ ದಾಸರು ಮೊದಲು ಮಾಡಿಕೊಂಡು ಮತ್ತಿನ ಎಲ್ಲ ದಾಸರುಗಳು ರಾಯ ರನ್ನು ಕೊಂಡಾಡಿದ್ದಾರೆ, ಅವರ ಮಹಿಮೆಯನ್ನು ಬಗೆಬಗೆಯಾಗಿ ಬಣ್ಣಿಸಿ ದ್ದಾರೆ. ಈ ಕೊಂಡಾಟದ ಕೀರ್ತನೆಗಳು ವಂದಿ ಮಾಗಧರಸ್ತುತಿ ಪಾಠಗ ಳಲ್ಲ, ಅತಿಶಯೋಕ್ತಿಯ ಅಲಂಕಾರಗಳಲ್ಲ. ರಾಯರು ತಮ್ಮ ಮೇಲೆ ಮಾಡಿದ ಅನುಗ್ರಹದ ಪರಿ ಎಂಥದು, ತಮಗೆ ಉಂಟಾದ ರಾಯರ ಮಹಿ ಮೆಯ ಅನುಭವವೇನು ಎಂಬುದನ್ನು ಲೋಕಕ್ಕೆ ತಿಳಿಸಿದ್ದಾರೆ. ಈ ದಾಸರುಗಳು, ರಾಯರು ತಮ್ಮ ದಿವ್ಯರೂಪವನ್ನು ಇವರಿಗೆ ಪ್ರತ್ಯಕ್ಷವಾಗಿ ವ್ಯಕ್ತಗೊಳಿಸಿದಾಗ, ತಮ್ಮ ದಿವ್ಯ ತೇಜಸ್ಸನ್ನು ಇವರ ಮನಸ್ಸಿನಲ್ಲಿ ಬೆಳ ಗಿಸಿದಾಗ ಆಶು ಪೂರ್ವಕವಾಗಿ ದಾಸರುಗಳ ಹೃದಯಾಂತರಾಳದಿಂದ ಉಕ್ಕಿ ಹೊರ ಹೊಮ್ಮಿದ ಭಾವಗಳು ಈ ಕೀರ್ತನೆಗಳು. ರಾಯರ ಪ್ರಭಾವ ಶಾಲಿಯಾದ ಕರುಣಾಮೂರ್ತಿ ಇವರ ಚಿತ್ತದಲ್ಲಿ ಸುಳಿದಾಡಿದಾಗ ಈ

ದಾಸರುಗಳು ಅವರ ಇದಿರಿನಲ್ಲಿ ತಮ್ಮ ಮನಸ್ಸಿನ ಕೊರಗನ್ನೂ, ಕಾರ್ಪಣ್ಯವನ್ನೂ, ಮನೋ ವಿಕಾರಗಳನ್ನೂ, ಅಲ್ಪತೆ ನ್ಯೂನತೆಗಳನ್ನೂ, ಕರ್ಮಾನುಭವಗಳನ್ನೂ ವಿಧವಿಧವಾಗಿ ತೋಡಿಕೊಂಡಿದ್ದಾರೆ. ಈ ಕೊರಗು ಕಾರ್ಪಣ್ಯಗಳು ಬರಿಯ ದಾಸರುಗಳಲ್ಲಿಯೇ ಇದ್ದವುಗಳಲ್ಲ. ಎಲ್ಲರಲ್ಲಿಯೂ ಇರುವಂಥವುಗಳು. ಇವುಗಳನ್ನು ದಾಸರು ಎಲ್ಲ ಜನರ ಪ್ರತಿನಿಧಿಯಾಗಿ ನಿಂತುಕೊಂಡು ತಾವೇ ಲೋಕಕಲ್ಯಾಣಕ್ಕಾಗಿ ರಾಯರಲ್ಲಿ ಬಿನ್ನವಿಸಿಕೊಂಡಿದ್ದಾರೆ. ಆದ್ದರಿಂದ ಈ ಹಾಡುಗಳನ್ನು ಹೇಳುವಾಗ ನಾವು ಇವುಗಳನ್ನು ರಚಿಸಿದವರಾರೆಂಬುದನ್ನು ಮರೆತುಬಿಡುತ್ತೇವೆ. ನಾವೇ ನಮ್ಮ ಸುಖದುಃಖಗಳನ್ನು ರಾಯರಲ್ಲಿ ಅರಿಕೆ ಮಾಡಿಕೊಳ್ಳುತ್ತಿದ್ದೇವೆ ಎಂದು ಭಾವಿಸುತ್ತೇವೆ.

ರಾಯರ ಮಹಿಮೆಯನ್ನು ಹೆಚ್ಚು ಪ್ರಚಾರ ಮಾಡಿದ ಕೀರ್ತಿ ಈ ದಾಸರುಗಳಿಗೆ ಸಲ್ಲುತ್ತದೆ. ಇವರು ರಾಯರ ಕೀರ್ತನೆಗಳನ್ನು ವಿವಿಧವಾದ ರಾಗ, ತಾಳ, ಮಟ್ಟುಗಳಲ್ಲಿ ರಚಿಸಿರುವುದರಿಂದ ಸ್ತ್ರೀಪುರುಷರೆಲ್ಲರೂ ಇವುಗಳನ್ನು ಸುಲಭವಾಗಿ ಹಾಡುತ್ತ ತೃಪ್ತರಾಗುತ್ತಾರೆ. ಜೋಗುಳ, ಲಾಲಿ, ಕೋಲು ಹಾಡುಗಳ ಮಟ್ಟುಗಳಲ್ಲಿ ರಚಿತವಾದ ಹಾಡುಗಳನ್ನು ತಾಯಂದಿರು ತಮ್ಮ ಮಕ್ಕಳನ್ನು ತೊಟ್ಟಿಲಲ್ಲಿ ಹಾಕಿ ಬಹು ಪ್ರೀತಿಯಿಂದ ಲಲ್ಲೆಗರೆದು ಹಾಡುತ್ತ ತೊಟ್ಟಿಲನ್ನು ತೂಗುತ್ತಾರೆ. ಆ ಮಕ್ಕಳಾದರೋ ತಾಯಂದಿರ ಮೃದು ಮಧುರವಾದ ಕಲಕಂಠ, ಕೈ ಬಳಗಳ ಪ್ರೇಂಖಣವನ್ನಾಲಿಸಿ ರಾಯರ ನಾಮ ಸುಧಾರಸವನ್ನು ಕಿವಿಯಿಂದೀಂಟಿ ಸುಖವಾಗಿ ನಿದ್ದೆ ಹೋಗುತ್ತವೆ. ಆ ಚಿಕ್ಕ ವಯಸ್ಸಿನಲ್ಲಿಯೇ ತಾಯಂದಿರು ತಮ್ಮ ಮಕ್ಕಳ ಮನಸ್ಸಿನಲ್ಲಿ ರಾಯರ ಭಕ್ತಿ ಬೀಜವನ್ನು ಬಿತ್ತಿ ಮಕ್ಕಳಿಗೆ ದೊಡ್ಡ ಉಪಕಾರ ಮಾಡುತ್ತಾರೆ. ದಾಸರುಗಳ ಈ ಹಾಡುಗಳನ್ನಲ್ಲದೆ ತಾಯಂದಿರು ಸ್ವಂತ ಕೆಲವು ಹಾಡುಗಳನ್ನು ರಚಿಸಿದ್ದಾರೆ, ಅವುಗಳನ್ನು ಅವರು ಕುಟ್ಟುವಾಗ, ಬೀಸುವಾಗ, ಮಕ್ಕಳನ್ನು ಮಲಗಿಸುವಾಗ ಇಂಪಾಗಿ ಹಾಡುತ್ತ ಸಂಸಾರ ತಾಪತ್ರಯಗಳನ್ನು ಮರೆತು ಜೀವನವನ್ನು ಆನಂದಮಯವಾಗಿ ಮಾಡುತ್ತಾರೆ.

ಹುಬ್ಬಳ್ಳಿ (ಹೂಬಳ್ಳಿ) ಹೆಬ್ಬಳ್ಳಿ ಹಬ್ಬೀತು ರಸಬಳ್ಳಿ ।
ತಗ್ಗಿನಾಗಿರುವ ಮಂಚಾಲಿ,
ಮಂಚಾಲಿರಾಯರ
ಹುಬ್ಬಿನಾಗಾವೆ ಎಳನಾಗ (ನಾವು) ॥

ಮಂಚಾಲಿ ನೋಡು ಕಂಚಿ ಪಟ್ಟಣ ನೋಡು ।
ಕೆಂಚಾನ ವೆರಡು ತೆನೆ ನೋಡು,
ತೆನೆ ನೋಡು ರಾಯರ ।
ಸಂಪತ್ತು ನೋಡು ಮಠದಾಗ ॥

ಉದ್ದಿನಾ ಕಾಳಷ್ಟು ಮುದ್ದು ವೃಂದಾವನ
ದಿಡ್ಡಿಗೆದುರಾಗಿ ಹನುಮಂತ,
ಹನುಮಂತ್ನ ಗುಡಿಯೊಳಗೆ ।
ವಿದ್ಯೆ ಕಲಿಯುವರು ಬಹುಜನ ॥

ಕಡಲೇಯ ಕಾಳಷ್ಟು ಕಡೆದ ವೃಂದಾವನ ।
ಮಠಕೆ ಎದುರಾಗಿ ಹನುಮಪ್ಪ,
ಹನುಮಪ್ಪ್ನ ಗುಡಿಯೊಳಗೆ ।
ಮಕ್ಕಳ್ ಬೇಡುವರು ಬಹುಜನ ॥

ಗುರು ರಾಘವೇಂದ್ರರ ಸೇವಕನು ನನ ಕಂದ ।
ಗಾಳಿದೂಳಿನ್ನ ಬಿಸಿಲೆನ್ನ,
ಬಿಸಿಲೆನ್ನ ದಾತಗೆ ।
ರಾಘವೇಂದ್ರಾರು ದಯವಾಗೆ ॥

ಎಂಥ ಮಾತೃ ಹೃದಯ, ಎಂಥ ಭಕ್ತಿ !

ಈ ಮುನ್ನುಡಿ ಸ್ವಲ್ಪ ದೀರ್ಘವೇ ಆಯಿತು. ರಾಯರ ಕೀರ್ತಿ ಸ್ವಯಂ ಪ್ರಭೆಯಿಂದ ಸದಾ ಪ್ರಕಾಶಿಸುತ್ತ ಇದೆ. ಅದನ್ನು ಇಂಥ ಮಂದ ಕಾಂತಿಯ ಮುನ್ನುಡಿಯಿಂದ ಬೆಳಗುತ್ತೇನೆನ್ನುವುದು ಮೌಢ್ಯವೇ ಸರಿ. ಸೂರ‍್ಯ ಪ್ರಕಾಶವನ್ನು ಹಗಲು ದೀವಟಿಗೆಯಿಂದ ಬೆಳಗಿದಹಾಗೆ. ಶ್ರೀಗೊರಾಬಾಳ ಹನುಮಂತರಾಯರ ಪ್ರೇಮಪೂರ್ವಕವಾದ ಬಲಾತ್ಕಾರಕ್ಕೆ ಒಳಗಾಗದಿರುವುದಕ್ಕಾದೀತೆ ? ಅವರು ತಮ್ಮ ರಾಯರ ಸೇವೆಯಲ್ಲಿ ನನ್ನನ್ನೂ ಎಳೆದುಕೊಂಡು ನನ್ನಿಂದ ಅಲ್ಪ ಸೇವೆಯನ್ನು ಮಾಡಿಸಿದ್ದಾರೆ.

ಈ ಕೀರ್ತನೆಗಳು ಪ್ರಕಟವಾದ ವಿಚಾರದಲ್ಲಿ ಒಂದು ಮಾತು. ಶ್ರೀ ಹನುಮಂತರಾಯರು ದಾಸರ ಕೀರ್ತನೆಗಳನ್ನು ಶೇಖರಿಸುವಲ್ಲಿ ಬಹಳ ದುಡಿದಿದ್ದಾರೆ. ಇದುವರೆಗೆ ಅನೇಕ ಸಂಪುಟಗಳಲ್ಲಿ ದಾಸರ ಕೃತಿಗಳನ್ನು ಶೇಖರಿಸಿ ಪ್ರಕಟಿಸಿ ಕನ್ನಡ ಜನತೆಗೆ ಉಪಕಾರ ಮಾಡಿದ್ದಾರೆ. ರಾಯರನ್ನು ಕುರಿತ ಸ್ತೋತ್ರಗಳನ್ನೆಲ್ಲ—ತಮಗೆ ಉಪಲಬ್ಧವಾದುವುಗಳನ್ನು—ಇಲ್ಲಿ ಸಂಗ್ರಹಿಸಿ ಪ್ರಕಟಿಸಿದ್ದಾರೆ. ಇವುಗಳನ್ನು ಅವರು ಶೇಖರಿಸಿದ್ದಾರೆ ಅಷ್ಟೆ, ಪರಿಷ್ಕರಿಸಿಲ್ಲ. ಅವು ತಮಗೆ ದೊರೆತ ಹಾಗೆ ಅಚ್ಚುಹಾಕಿಸಿದ್ದಾರೆ. ರಾಯರ ಕೀರ್ತನೆಗಳು ಇಲ್ಲಿ ಏಕತ್ರ ಸಂಕಲಿತವಾಗಿರುವುದರಿಂದ ಭಕ್ತರುಗಳು ಈ ಸಂಗ್ರಹವನ್ನು ಸಂಪಾದಿಸಿ ರಾಯರ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಹಾರಯಿಸಿದೆ.

ಆಷಾಢ ಶು॥ ೬ — ೧೮೭೧ ಶಾ. ಶ.

ಡಿ. ಕೆ. ಭೀಮಸೇನ ರಾವ್ (ಎಂ. ಎ.,)
(ಕನ್ನಡ ಪ್ರಾಧ್ಯಾಪಕರು, ಉಸ್ಮಾನಿಯಾ ವಿಶ್ವವಿದ್ಯಾಲಯ)
ಹೈದರಾಬಾದು.



## ಶ್ರೀ ಗುರುರಾಜೋ ವಿಜಯತೇ.

ಹರಿಸ್ಮೃತಿ ಸರ್ವ ವಿಶುದ್ಧಿ ಮೋಕ್ಷಣೀ ।
ಗುರುಸ್ಮೃತಿ ಸರ್ವಸಮೃದ್ಧಿದಾಯಿನೀ ॥

# ಶ್ರೀ ಗುರುರಾಜರ ಸಂಪತ್ತು

**ಗುರುಗಳಲ್ಲಿ ಕೃತಜ್ಞತೆ :—**

ಇಂದಿನ ಗುರುಸೇವೆ ಇದೇ ನನ್ನ ಭಾಗ್ಯ, ಇದೇ ನನ್ನ ಸಂಪತ್ತು ನಮ್ಮ ಮಂಡಲ ಸ್ಥಾಪಿತವಾಗಿ ಸುಮಾರು (೫) ವರ್ಷವಾಯಿತು. ಕೆಲಸ ಗಾರರ ಕೊರತೆ, ಹಣಕಾಸಿನ ಕೊರತೆ, ಅಚ್ಚಿನ ಅನಾನುಕೂಲತೆ, ಪ್ರಚಾರ ಕಾರ್ಯ ಸರಿಯಾಗಿ ಇಲ್ಲದಿರುವಿಕೆ, ಸಂಸಾರದಲ್ಲಿ ಅನೇಕ ಮನೋ ವ್ಯಗ್ರತೆ ತೊಂದರೆ ದೇಹಾಲಸ್ಯವಿದ್ದರೂ ಶ್ರೀ ಗುರು ರಾಜರ ಅನುಗ್ರಹ ದಿಂದ (೫) ಪ್ರಕಟನೆಗಳು ಹೊರಬಿದ್ದವು. ಈ ನಡುವೆ ಒಂದು ವರ್ಷ ದಿಂದ ನರಗಳ ದುರ್ಬಲತೆ, ಶಕ್ತಿಹೀನತೆಯ ಮೂಲಕ ನಾನಾ ರೋಗ ಗೆಗ್ರಸ್ತನಾಗಿ (೬) ತಿಂಗಳು ಹಾಸಿಗೆ ಹಿಡಿದ ಕಾಲ ಶ್ರೀ ಹರಿದಾಸ ಸಾಹಿತ್ಯ ಪ್ರಚಾರ ಕಾರ್ಯವೇ ನಿಂತಿತೆಂಬ ಯೋಚನೆಯಲ್ಲಿ ಶ್ರೀ ಶ್ರೀಗುರು ರಾಜರು ಸ್ವಪ್ನದಲ್ಲಿದ್ದವನನ್ನು ಎಚ್ಚರಿಸಿದಂತೆ, ಯೋಚನೆ ಬೇಡ. ತಕ್ಕಂತೆ ಆರೋಗ್ಯ ಭಾಗ್ಯವು. ಶೇಷಾಯುಷ್ಯ ಹರಿದಾಸರ ಸೇವೆಯಲ್ಲಿ ಕಳೆ, ಸಕಲವೂ ಅನುಕೂಲವೆಂದಾಜ್ಞಾಪಿಸಿ ಸೂಚಿಸಿದ ಅಗಮ್ಯ ಮಹಿ ಮೆಯ ಗುರುಸ್ಮೃತಿಯು ಇಂದಿನ ಕಾರ್ಯಕ್ಕೆ ಅನುಕೂಲವಾಗಿದೆ. " ಗುರುವಿನೊಲಿಮೆಯಾಗದ ತನಕ ದೊರೆಯದಣ್ಣ ಮುಕುತಿ "; ' ಗುರು ದ್ವಾರ ವಿಲ್ಲದೆ ಸಿದ್ಧ ಸಾಧನವಿಲ್ಲ' ಎಂಬ ದಾಸರ ವಚನ ಸತ್ಯ ಸತ್ಯ.

**ಮೂಲ, ಅಂಶ :—**

ಅಗಮ್ಯ ಮಹಿಮರಾದ ಶ್ರೀ ಗುರುರಾಜರು ಆವ ದೇವತೆ ಎಂಬ ವಿಚಾರ ೩-೪ ಪುರಾಣದಲ್ಲಿ ಬಂದಿದೆ. ಸ್ಕಾಂದ ಪುರಾಣ, ಶಿಂಹಾಚಲ

ಮಹತ್ಮ್ಯ ಇವುಗಳಲ್ಲಿ "ಸುಮುಖರೆಂಬ ಹರಿ ಪಾರ್ಷದರೆಂತಲೂ" ಗರುಡ ಪುರಾಣ ಬ್ರಹ್ಮಕಾಂಡದಲ್ಲಿ "ವಾಯು ಪುತ್ರ ವಿಷ್ವಕ್ ಸೇನ, ಹರಿಪಾರ್ಷದರೆಂತಲೂ" ನರಸಿಂಹ ಪುರಾಣದಲ್ಲಿ ಮತ್ತೊಂದು ವಿಧವಾಗಿಯೂ ಉಕ್ತವಾಗಿದೆ. ಇದು ಕಲ್ಪಾಂತರ. ಕಾಲವ್ಯತ್ಯಾಸದಿಂದ ಅವತಾರಗಳು ಬೇರೆ ಬೇರೆ ಆಗುವುವೆಂದು ಸರ್ವಜ್ಞರ ಉಕ್ತಿ.

ಶ್ರೀ ವ್ಯಾಸರಾಜರ ಸ್ತೋತ್ರ ಸುಳಾದಿಯಲ್ಲಿ ಶ್ರೀ ಪುರಂದರ ದಾಸರು 'ಶೇಷಾಂಶ ಪ್ರಹ್ಲಾದ, ವ್ಯಾಸಮುನಿಯೆಂದು' ಹೇಳಿರುವಂತೆ; ಶ್ರೀ ವಿಜಯ ದಾಸವರ್ಯಾದಿ ಅಪರೋಕ್ಷ ಜ್ಞಾನಿಗಳು, ಪ್ರಹ್ಲಾದನೇ ಬಾಹ್ಲೀಕ ವ್ಯಾಸಮುನಿಯೇ ರಾಘವೇಂದ್ರರೆಂದು ನಾಲ್ಕು ಅವತಾರಗಳನ್ನು ಸ್ತುತಿಸಿರುವರು. ಶೇಷಾಂಶ, ಶೇಷಾವಿಷ್ಟರಾದ ಕಾರಣ ಕೆಲ ದಾಸರು ನಾಲ್ಕು ಯುಗಾನುಕ್ರಮ, ಪ್ರಲ್ಹಾದ, ಲಕ್ಷ್ಮಣ, ಬಲರಾಮನೆಂದು ಸ್ತೋತ್ರಗೈದಿರುವರು. ವ್ಯತ್ಯಾಸವೇನು ಇಲ್ಲ. ೧ಳ ವಿಧ ತಾರತಮ್ಯ ಗುರುದ್ವಾರಾ ತಿಳಿಯೆ ಸಂಶಯ ನಿವೃತ್ತಿ.

ಶ್ರೀ ಜಗನ್ನಾಥ ದಾಸರಾಯರು, 'ಫಾಳಿಯುತ ಪ್ರಹ್ಲಾದ ಬಾಹ್ಲಿಕ ರಾಯನೆನಿಸಿದನು'' ಮತ್ತು "ಜನಪ ಕರ್ಮಜರೊಳಗೆ ನಾರದ ಅನುಗ್ರಹ ಬಲದಿ ಪ್ರಹ್ಲಾದ ನಳ ಭೃಗು ಭೃಗುದಾಯಕ್ಷಸೆಯರಿಗೆ ಸಮನೆನಿಸಿಕೊಂಬ'' ಎಂದು ಹರಿಕಥಾಮೃತಸಾರ ಬೃಹತ್ತಾರತಮ್ಯದಲ್ಲಿ ಹೇಳಿರುವರು. ಬೃಹತ್ತಾರ ತಮ್ಯದಿ ತಾತ್ವಿಕ ದೇವತೆಗಳ ಕಕ್ಷದಲ್ಲಿ ಸೇರಿದ ದೇವ ಸ್ವಭಾವರು, ಅಗಮ್ಯ ಮಹಿಮರು. ಸಕಲ ಸಚ್ಚೇತನರ ಸ್ಥೂಲ ಶರೀರದಲ್ಲಿ ಮಾತ್ರ ನಿಂತು ಜ್ಞಾನವನೀಯೆಂದು ಶ್ರೀಹರಿವಾಯುಗಳ ಸ್ತೋತ್ರಗೈಯುವರು.

**ಅಗಮ್ಯ ಮಹಿಮೆ —**

"ಅಗಮ್ಯ ಮಹಿಮಾ ಲೋಕೆ ರಾಘವೇಂದ್ರೋ ಮಹಾಶಯಃ'' ಎಂಬಂತೆ ಶ್ರೀಗುರು ಸಾರ್ವಭೌಮರು ಹಿಂದಿನ ಅವತಾರಗಳಲ್ಲಿ ಭಕ್ತ ಜನ

ರನ್ನು ಉದ್ಧರಿಸಿದಂತೆ ಇಂದಿನಕಾವ್ಯ ಭಕ್ತರ ಬಯಕೆ ಸಲ್ಲಿಸುವುದು ಅಚ್ಚರಿಯಲ್ಲ. ಇವರಾರು ? ಶ್ರೀ ಹರಿಭಕ್ತಾಗ್ರೇಸರರಾದ ಕರ್ಮಜ ದೇವತೆಗಳಲ್ಲಿ ವರರಾದ, ಸೂಕ್ಷ್ಮಧರ್ಮವನ್ನು ತಿಳಿದವರು. ನಿರ್ವ್ಯಾಜದಿಂದ ಚಿಕ್ಕ ಬಾಲ ನಿರುವಾಗಲೇ ಹರಿಸೇವೆ ಗೈದ ಪ್ರಹ್ಲಾದರು ಸೂಕ್ಷ್ಮ ಧರ್ಮವನ್ನು ತಿಳಿದ ೧೨ ಜನರಲ್ಲಿದ್ದ ಮಹಾ ಮಹಿಮರು. " ಸ್ವಯಂಭು ನಾರದಃ ಶಂಭು ಕುಮಾರಃ ಕಪಿಲೋಮುನಿಃ । ಪ್ರಹ್ಲಾದೋ ಜನಕೊ ಭೀಷ್ಮೋಬಲಿ ರ್ವೈಯಾ ಸಕೀವಯಂ। ದ್ವಾದಶೇತೆ ವಿಜಾನೀಯಾ ಧರ್ಮಂ ಭಾಗವತಂ ಭಟ್ವಾಃ " ಎಂದು ಯಮದೇವರ ವಚನ ( ೬ ನೇ ಸ್ಕಂದ ಭಾಗವತ ) ಇವರಲ್ಲಿ ಸಂತತಾ ವಾಯು ಆವಿಷ್ಟ, ' ಏತತ್ ಶ್ರುತಾ ನಾರದಸ್ತು ಗರ್ಭಸ್ಥೋಹಿ ಮಹಾಪ್ರಭು। ಪ್ರಕರ್ಷಾಲ್ಹಾದ ಸಂಯುಕ್ತೋ ಬಭೂವಹರಿವಲ್ಲಭಃ। ತತೋ ಯಯೌ ಮುನಿಶ್ರೇಷ್ಠ ಬ್ರಹ್ಮಲೋಕಂ ಪ್ರತಿಖಗ ] ಅಥೋಶು ಚಿಸ್ಮತೀ ದೇವಿ ಸುಷಾವಪುತ್ರ ಮುತ್ತಮ್ ॥ ವಾಯುನಾಚ ಸಮಾವಿಷ್ಣಂ ಹರಿಪಾದಾಬ್ಜ ಸಂಕ್ರಯಂ " ಬ್ರಹ್ಮಕಾಂಡಂ ( ಅಧ್ಯಾಯ ೩೮ ) ವಾಯು ಆವೇಶಮೂಲಕ ಸೂಕ್ಷ್ಮ ಧರ್ಮ ಬಲ್ಲವರು. ಈ ಕರ್ಮಜ ದೇವತೆಗಳ ಸಾಧನೆ [೫] ಬ್ರಹ್ಮಕಲ್ಪ ವಿರಾಡ್ರೂಪೋಪಾಸನೆ, ಬ್ರಹ್ಮಾಂಡ ದಲ್ಲಾಗುವ ಎಲ್ಲ ಕಾರ್ಯವನ್ನು ತಿಳಿದ ಜ್ಞಾನಿಗಳು.

ಪ್ರಹ್ಲಾದ ರಾಜರು ೫ ವರ್ಷದ ಬಾಲಕನಿರುವಾಗಲೇ ನಿರ್ವ್ಯಾಜ ಭಕ್ತಿಯಿಂದ ಸಮಸ್ತ ಜಡಚೇತನರಲ್ಲಿ ಶ್ರೀಹರಿ ವ್ಯಾಪ್ತತ್ವ ತೋರಲು ಶ್ರೀ ನರಸಿಂಹನನ್ನು ಭಕ್ತಿ ಪಾಶದಿಂದೆಳೆದು ಕಂಭದಿಂದ ಪ್ರಕಟಗೈಸಿದ ಅಗಮ್ಯ ಮಹಿಮರು.

ಇಂತು ಶ್ರೀ ನರಸಿಂಹದೇವರು ಪ್ರಹ್ಲಾದನ ತಂದೆ ಹಿರಣ್ಯಕಶಪು ದೈತ್ಯನ ವಧೆಯ ಅನಂತರ ಜ್ಞಾನ ಮೂರ್ತಿಯಾದ ಶ್ರೀ ನರಸಿಂಹನ ಮನ್ಯು (ಕೋಪ) ಶಾಂತವಾಗದಿರಲು ರಮಾದಿಗಳು ಬೆಸಗೊಂಡು ಭಕ್ತ ಪ್ರಹ್ಲಾದ ಬಾಲನನ್ನು ಮುಂದೆಗೈಸಲು ಪ್ರಹ್ಲಾದನು ಅನೇಕವಿಧದಿಂದೆ ಸ್ತೋತ್ರ ಗೈದು ಶ್ರೀಹರಿಯನ್ನು ಸಂತೋಷಪಡಿಸಿದನು. ನಿತ್ಯಾನಂದ

ನಾದ ಹರಿಗೆ ಭಕ್ತರ ತೋಷವೆ ತೋಷ; ಶ್ರೀಹರಿಯು ಪ್ರಹ್ಲಾದನ ಶಿರದಲ್ಲಿ ಕರವಿಡಲು ಸಂಚಿತಾಗಾಮಿ ಕರ್ಮ ನಾಶವಾಗಿ ಬಿಂಬದರ್ಶನ ವಾಯಿತು. 'ಭಕ್ತ ಪ್ರಹ್ಲಾದ ವರಬೇಡು' ಎಂದು, ನರಸಿಂಹನು ಹೇಳಲು ಇದು (ವಣಿಕ್) ವ್ಯಾಪಾರವೆ? ವರಬೇಡುವ ಭೃತ್ಯತ್ವ ಎನ್ನಲಿಬೇಡ, ವರ ಕೊಡುವ ಸ್ವಾಮಿತ್ವ ನಿನ್ನಲಿ ಬೇಡ, ವರಕೊಡುವುದಾದರೆ ಎನ್ನ ಪಿತಗೆ ಕೊಡು. ಎಂಬ ಭಾಗವತ ವಚನದಂತೆ,

"ಫಲಬೇಡಿ ಸೇವೆ ಮಾಡುವ ದಾಸನಲ್ಲ, ಫಲಕೆ ಇಚ್ಛೈಸುವ ಸ್ವಾಮಿ ನೀ ಅಲ್ಲ! ಹಲವು ಮಾತೇನು ಈ ವಿವರವನೆಲ್ಲ ತಿಳಿದ ಸರ್ವಜ್ಞರಿಗೆ ಬಿನ್ನೈಸೊ ಸೊಲ್ಲ" ಎಂದು ಶ್ರೀಗುರು ಗೋಪಾಲದಾಸರ ವಚನ (೨೦) ನೇ ಪದದಲ್ಲಿದೆ. ಹೀಗೆ ನಿರ್ವ್ಯಾಜ ಭಕ್ತನಿಗೆ ಮುಂದೆ ಭಕ್ತರುದ್ಧಾರ ಗೋಸುಗ ನನ್ನ ಆಜ್ಞೆಯಂತೆ 'ವರರಾಜ್ಯ ಮನ್ವಂತರ ಪರಿಪಾಲಿಸೆಂದು ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು'

**ಭಕ್ತೇಷ್ಟ ಪ್ರದಾತೃತ್ವ :-**

ಅಪರೋಕ್ಷ ಜ್ಞಾನಿಯಾದ ಪ್ರಹ್ಲಾದ ರಾಜನು ಶ್ರೀಹರಿಯಾಜ್ಞೆಯಂತೆ ಕೇವಲ ಸತ್ಯಸಂಧ ಜಿತೇಂದ್ರಿಯ ನಾಗಿ ರಾಜ್ಯ ಪರಿಪಾಲನೆಗೈವಾಗ್ಗೆ, ಯಜ್ಞ ಯಾಗಾದಿ ಅನೇಕ ಪುಣ್ಯ ಕಾರ್ಯಗಳನ್ನು ಮಾಡಿದರೂ, ಅಪರೋಕ್ಷಿಯಾದ ಪ್ರಹ್ಲಾದ ರಾಯರಿಗೆ ಈ ಸ್ಥೂಲ ಪುಣ್ಯವು ಮೋಕ್ಷಕ್ಕೆ ಕಾರಣ ವಾಗಲಿಲ್ಲ.

ಕಾರಣ ಬೇಕಾಗದೇ ಇದ್ದದ್ದು ಅನಿಷ್ಟವೆಂದು ಕರೆಸಿತು. ನರಸಿಂಹ ದೇವರು "ಭೋಗೇನ ಪುಣ್ಯಂ ಕುಶಲೇನ ಪಾಪಂ ಕಲೇವರಂ ಕಾಲಜವೇನಹಿತ್ವಾ" ಕೀರ್ತಿರ್ವಿಶುದ್ಧಾಂ ಸುರಲೋಕ ಗೀತಾಂ ವೀತಾಯಮಾಮೋಷ್ಯಸಿ ಮುಕ್ತಬಂಧಃ' । ಎಂದು ಅಪ್ಪಣೆ ಕೊಡಿಸಿದರು. ಮುಕ್ತಿಗೆ ಅಭಿಮೇತು ವಾಗದೇ ಇದ್ದ ಪುಣ್ಯ ಸುಖ ಪ್ರಾರಬ್ಧ ಭೋಗದಿಂದಲೂ ಮತ್ತು ಈ ಅನಂತ ಪುಣ್ಯವನ್ನು ಅವರಾದ ಭಕ್ತರಿಗಿತ್ತು ಪ್ರಾಯಶ್ಚಿತ್ತಾದಿ

ಕುಶಲ, ಕರ್ಮದಿಂದ ಪಸರಿಸಿ ಮುಕ್ತ ಬಂಧನಾಗಿ ನನ್ನ ಬಳಿಗೆ ಬಾ ಎಂದಾ ಜ್ಞಾಪಿಸಿದಂತೆ, ಹಿಂದಿನಂತೆ ಆಗಮ್ಯ ಮಹಿಮೆ ಇಹಲೋಕದ ನಮ್ಮಂಥ ಅಜ್ಞ ಜನರಿಗೆ ತೋರುವದು ಬೆಡಗಲ್ಲ.

ವಿಷ್ಣು ರಹಸ್ಯಾದಿ ಗ್ರಂಥಗಳಲ್ಲಿ :—'' ಅಪರೋಕ್ಷ ಜ್ಞಾನಾನಂತರ ವಿಶೇಷ ಭಕ್ತಿ ಹುಟ್ಟುತ್ತದೆ; ಇದರಿಂದ ಪ್ರಕೃತ್ಯಾದಿ ಅವಿದ್ಯಾ ಬಂಧಸದಿಂದ ಬಿಡುಗಡೆ. ಕರ್ಮಕ್ಷಯವು ಅಪರೋಕ್ಷ ಜ್ಞಾನದಿಂದಾಗುವದು. ಸಂಚಿತ ವಾದ ಅನಿಷ್ಟ ಕರ್ಮವು ಸರ್ವಾತ್ಮನಾ ವಿನಾಶವಾಗುತ್ತದೆ.'' ಅಂದರೆ ಅನಿಷ್ಟ ಪುಣ್ಯವು ಕೆಲವು ಅವರರಾದ ಸುಹೃತ್ ಆಪ್ತೇಷ್ಟರಿಗೆ ದಾನ. ಅನಿಷ್ಟ ಪಾಪ ಕೆಲವು ವಿಷ್ಣು ವೈಷ್ಣವ ದ್ವೇಷಿಗಳಿಗೆ ದಾನ. ಕೆಲವು ಸ್ವರೂಪದಿಂದಲೇ ನಾಶ, ಪ್ರಾರಬ್ಧ ಕರ್ಮ ಭೋಗದಿಂದಲೇ ನಾಶವೆಂಬ ನಿಯಮ.

ಇನ್ನು ಇಷ್ಟ ಪುಣ್ಯವು ಅಪರೋಕ್ಷಾನಂತರ ಧ್ಯಾನದಲ್ಲಿ ಬಿಂಬೋ ಪಾಸನೆಯೆ ಪ್ರಾಮುಖ್ಯವಾಗಿ ಮುಕ್ತಿಯಲ್ಲಿ ಆನಂದ ಪ್ರದವೆಂಬ ಶ್ರೀ ವಿಜಯ ದಾಸರ ವಚನ.

ಹೀಗೆ ಪ್ರಲ್ಹಾದ ರಾಜರು ತಮಗೆ ಮುಕ್ತಿಯ ಆನಂದಕ್ಕೆ ಬೇಕಾಗ ದಿದ್ದ ಅನಂತ ಅನಿಷ್ಟ ಪುಣ್ಯವು ಭಗವದಿಚ್ಛೆಯಿಂದ ಒದಗಿದ್ದನ್ನು ಶ್ರೀ ರಾಘವೇಂದ್ರರ ಅವತಾರದಲ್ಲಿ ಅನೇಕ ಭಕ್ತರುಗಳಿಗೆ ಸತಿ ಸುತ ಧನ, ಆಯು ಆರೋಗ್ಯ ಕೊಟ್ಟು, ಅನೇಕ ಅಭೀಷ್ಟಗಳನ್ನು ಸಲ್ಲಿಸುವರು.

'' ಸೋತ್ತು ಮರನಿಷ್ಟ ಪುಣ್ಯವೆ ಬಂದು ಭೃತ್ಯರ ಸುಖಕೆ ಕಾರಣ ವಾಹುದೆಂದು ಕ್ಲಪ್ತವಾಗಿದೆ ನಮಗೆ ವೊಲಿದಾನೆ ಇಂದು ! ಇತ್ತು ಪಾಲಿಸ ಬೇಕು ದೀನ ಜನ ಬಂಧು " ಎಂದು ಗುರು ಗೋಪಾಲ ದಾಸರು ( ಈ ಪುಸ್ತಕದ ೨ನೇ ಪದದಲ್ಲಿ) ಹೇಳಿದ್ದಾರೆ.

**ಮುಕ್ತಿಪ್ರದಾತೃತ್ವ :—**

ಇಂಥ ದೇವ ಸ್ವಭಾವರೂ ಅಗಮ್ಯ ಮಹಿಮರೂ ವಿರಾಡ್ರೂಪೋಪಾ ಸಕರೂ ಬ್ರಹ್ಮಾಂಡದ ಸಕಲ ಕಾರ್ಯವನ್ನು ಅರಿತವರೂ ಸಂತತ ವಾಯು

ನಿರಾವಿಷ್ಟರಾದ ಕಾರಣ ಮುಕ್ತಿಯನ್ನೆ ಕೆಲವು ಭಕ್ತರಿಗೆ ಕೊಟ್ಟರೆಂಬ ಮೇಲೆ ಜ್ಞಾನ ಭಕ್ತ್ಯಾದಿಗಳನ್ನು ಬಿಟ್ಟು ಕಾಮ್ಯ ಫಲದಿಂದ ಇಹದ ಸೌಖ್ಯ ಬಯಸಿ ಸೇವಿಸುವುದು ನಮ್ಮಂಥ ಅಲ್ಪರ ಮತಿ ಮಹಾರಾಜನಲ್ಲಿ ಹೋಗಿ ದುಗ್ಗಾಣಿ ಯಾಚಿಸಿದಂತಾಗುವದು.

ಸಂತತ ವಾಯು ಆವೇಶ ಇವರಲ್ಲಿದ್ದುದರಿಂದ ಇವರಲ್ಲಿಯೂ ಮುಕ್ತಿ ಪ್ರದಾತೃತ್ವವೂ ಉಂಟೆಂಬುದು ಸಿದ್ಧ. ಆದರೆ ಮುಕ್ತಿಯು ಬ್ರಹ್ಮ ಪ್ರಳಯ ಕಾಲ, ವಿರಾಜಾನದಿಯಲ್ಲಿ ಲಿಂಗಭಂಗಾನಂತರ 'ಬ್ರಹ್ಮ ಪ್ರಳಯಕಾಲ, ವಿರಜಾನದಿಯಲ್ಲಿ ಲಿಂಗಭಂಗಾನಂತರ' ಬ್ರಹ್ಮಣಾಸಹ ಮುಕ್ತಿ, ಎಂಬ ನಿಯಮವಿದೆ. ಶ್ರೀ ಗುರುರಾಜರಿತ್ತ ಮುಕ್ತಿ ಎಂಥದಿದು? ಸಾಧನ ಪೂರ್ತಿಯಾದ ನಿಜ ಭಕ್ತರ ಸಂಚಿತಾಗಾಮಿ ನಾಶಗೈದು ಅಪರೋಕ್ಷ ಜ್ಞಾನಿಗಳನ್ನಾಗಿ ಮಾಡಿ ಭೋಗದಿಂದ ಪ್ರಾರಬ್ಧ ಕರ್ಮ ಉಪಮರ್ದಗೈಸಿ ಸ್ಥೂಲವಾದ ಕೊನೆಯ ದೇಹವನ್ನು ಕೊಟ್ಟು, ಪುನಃ ಸಂಸಾರದಲ್ಲಿ ಬಾರದಂತೆ ಮಾಡಿ ಈ ದೇಹ ಬಿಡಿಸಿ, ಬ್ರಹ್ಮ ಪ್ರಳಯಾಂತ ಜ್ಞಾನ ಲೋಕಗಳಾದ ಮಹಠಾದಿ ಸತ್ಯಲೋಕಾದಿಗಳಲ್ಲಿರಿಸುವದೆ. ಮುಕ್ತಿ ಸಂಸಾರ ಬಂಧ ಮೋಚನ ಇಂಥ ಮುಕ್ತಿಯನ್ನಿತ್ತ ಅಗಮ್ಯ ಮಹಿಮರು. ಐಹಿಕ ಫಲಗಳನ್ನು ಕೊಡುವದು ಏನಾಶ್ಚರ್ಯ? ದೇವತೆಗಳನ್ನು ಬೆಡಗುಗೈಸಿದವರು, ನರಲೋಕದ ಅಜ್ಞರಿಗೆ ಮಹಿಮೆ ತೋರುವುದು ಏನಚ್ಚರಿ!

**ಗ್ರಂಥಕರ್ತೃತ್ವ:—**

ಇಂತಹ ಸರ್ವಜ್ಞ ಕಲ್ಪರು ಶ್ರೀ ಸರ್ವಜ್ಞರ ಗ್ರಂಥಗಳಿಗೆ ಟಿಪ್ಪಣಿ ಬರೆಯುವದಲ್ಲದೆ ಕೆಲ ಸ್ವತಂತ್ರ ಗ್ರಂಥಗಳನ್ನು ರಚಿಸಿದರು. ಒಟ್ಟಿಗೆ ೪೭ ಗ್ರಂಥಗಳಿರುವವು. ಈ ಗ್ರಂಥಗಳ ಮೇಲಿಂದಲೂ ಇವರು ಅಗಮ್ಯ ಮಹಿಮರೆಂದು ಸ್ಪಷ್ಟ. ಶ್ರೀ ಹರಿಯು ಅನಂತ ರೂಪಗಳಿಂದ ಇವರಲ್ಲಿ ನಿಂತು ಕಾರ್ಯ ಮಾಡುವನು. 'ದಿನದಿನದಲ್ಲಿ ನೂತನ ವಾರ್ತೆಗಳಾಗುವವು,' ಎಂಬ ದಾಸರ ವಚನ ನಿಜ. ಶ್ರೀ ವಿಜಯ ದಾಸಾದಿ ಅಪರೋಕ್ಷ ಜ್ಞಾನಿಗಳು ಅಗಮ್ಯ ಮಹಿಮರಾದ ಶ್ರೀ ಗುರು ರಾಜರನ್ನು ನಾನಾ ಬಗೆಯಿಂದ ಕೊಂಡಾಡಿರುವರು.

**ಪ್ರಕಾಶಕರ ಮಾತು:—**

ಈ ಸ್ತೋತ್ರ ಪದಗಳನ್ನು ಹಳೆಯ ಪ್ರತಿಗಳ ಮೇಲಿಂದ ಸಂಗ್ರಹಿಸಿ ಒಗ್ಗೂಡಿಸಿ, ಮೂಲ ಪ್ರತಿಯಲ್ಲಿದ್ದಂತೆ ಅಚ್ಚುಹಾಕಿಸಿದೆ. ಮೊದಲಿಗೆ ಶ್ರೀ ಗುರುರಾಜರ ಸ್ತೋತ್ರ, ಕವಚ, ಮಂಗಳಾಷ್ಟಕ ಮಂಗಳಪ್ರದವೆಂದು ಕೊಟ್ಟು ಜ್ಞಾನಿಗಳ ಕಾಲ ಕ್ರಮವಾಗಿ ಅವರು ರಚಿಸಿದ ೧೩೪ ಪದ (೬) ಸುಳಾದಿ ಕೊಡಲಾಗಿದೆ. ಇವುಗಳ ಪೈಕಿ ೩೫—೪೦ ಪದಗಳು ಮಾತ್ರ ಈ ಗಾಗಲೇ ಅಚ್ಚಾಗಿವೆ. ಕೆಲವುದರಲ್ಲಿ ಅಂಕಿತವೇ ಬದಲು ಆಗಿವೆ. ಕೆಲವುದರಲ್ಲಿ ನುಡಿಗಳೇ ಕಡಿಮೆ, ಕೆಲವು ಪದಗಳು ತಿದ್ದಿದ್ದಾರೆ. ಕಾರಣ ನಮ್ಮ ಕಾರ್ಯ ಕ್ರಮದಂತೆ ಇವೆಲ್ಲವನ್ನು ಸರಿಪಡಿಸಿದೆ.

**ಉಪಕಾರ ಸ್ಮರಣೆ:—**

ಈ ಮಹತ್ಕಾರ್ಯದಲ್ಲಿ ನಾಕಷ್ಟು ದ್ರವ್ಯವನ್ನು ದಾನ ಮಾಡಿದ, ಹೈದರಾಬಾದಿನ ಕರ್ನಾಟಕ ಶಿಕ್ಷಣ ಸಮಿತಿಯ ಅಧ್ಯಕ್ಷ ಶ್ರೀ ವೇ|| ಪಂಡಿತ ಜಿ. ರಾಮಾಚಾರ್ಯ ವಕೀಲ ಇವರಲ್ಲಿ ಅನಂತ ವಂದನೆಗಳು.

ಸುಂದರವಾದ ಮುನ್ನುಡಿಯನ್ನು ಬರೆದು ಕೊಟ್ಟ ಪ್ರೊಫೆಸರ ಡಿ. ಕೆ. ಭೀಮಸೇನ ರಾಯರಲ್ಲಿ ಕೃತಜ್ಞತೆ. ಶ್ರೀ ಗುರುರಾಜರ ಭಾವಚಿತ್ರ ಮೂಲ ಪ್ರತಿ ಒದಗಿಸಿ ಕೊಟ್ಟ ಶ್ರೀ ಗೋಪಾಲ ಕೃಷ್ಣರಾಯರ ಉಪಕಾರ ಸ್ಮರಿಸುತ್ತದೆ.

ದಾಸರದಾಸ,

**ಹನುಮಂತರಾವ ಗೋರಬಾಳ**

ಸಂಚಾಲಕ.

ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸೂಗೂರ.

**ಚಂದ್ರಗುಪ್ತ ಮುದ್ರಣಾಲಯ, ಅಫ್ಜಲ್‌ಗಂಜ್ ಹೈದರಾಬಾದ ದಕ್ಷಿಣ.**

# ಅನುಕ್ರಮಣಿಕೆ

೨೯ ತಂದೆ ಸುಧೀಂದ್ರ ಕೃತ :—



೩೦. [ಹರಪನಹಳ್ಳಿ ದಾಸರು]ಇಂದಿರೇಶ :—

# ತಿದ್ದುಪಡಿ.



| ಪುಟ | ಪಂಗ್ತಿ | ತಪ್ಪು | ಒಪ್ಪು |
|---|---|---|---|
| ೧೧ | ೧೧ | ಸುತ್ರಂಪ್ರೋ | ಸುತಪೋ |
| ೧೧ | ೨೨ | ವಿದ್ಯಾದಿನಾನಕ್ತ | ವಿದ್ಯಾದಿದಾನಾಸಕ್ತ |
| ೧೫ | ೧೩ | ನೇಜ್ಞಾನೇಂದ್ರ | ಸುಜ್ಞಾನೇಂದ್ರ |
| ೨೩ | ೨೩ | ಜದೊಳಗೆ | ಜಗದೊಳಗೆ |
| ೩೧ | ೨೦ | ಪಾವನಕರ | ಪಾವನತರ |
| ೩೨ | ೨೩ | ಭ್ಯಾಮುಕ | ಭ್ರಾಮುಕ |
| ೪೫ | ೧೯ | ಸುರಧೆನು | ಸುರಧೇನು |
| ೪೯ | ೨ | ಬಾಗ್ಯ | ಬ್ಯಾಗ |
| ೫೦ | ೨೪ | ಹಿಮಪತರ್ವತ | ಹಿಮಪರ್ವತ |
| ೫೦ | ೨೪ | ಸ್ತಿತ | ಸ್ಥಿತ |
| ೫೧ | ೨ | ಪರಿಶುದ್ಧಾಧಂ | ಪರಿಶುದ್ಧಾರ್ಥ |
| ೫೧ | ೬ | ಪಾಲಿಸ ಸುತಲಿ | ಪಾಲಿಸ ಸುತಲಿ |
| ೫೪ | ೧೩ | ಊತ್ಕೃಷ್ಟವನು | ಉತ್ಕೃಷ್ಟವನು |
| ೫೪ | ೨೧ | ಕೊಟ್ಟನ್ನ | ಕೊಟ್ಟನ್ನ |
| ೫೫ | ೮ | ಮಮಕಳಿಯಾ | ಮಮಶ್ರಮಕಳಿಯಾ |
| ೫೫ | ೯ | ಇಷ್ಟಾಶ್ರಮವರ್ಥ | ಇಷ್ಟಾರ್ಥ |
| ೫೯ | ೧೧ | ವರೌನ | ಪೌನ |
| ೬೩ | ೧೪ | ಕೇಶ | ಭೇಶ |
| ೬೮ | ೬ | ಕನಕದ್ರಿ | ಕನಕಾದ್ರಿ |

| | | | |
|---|---|---|---|
| ೭೦ | ೧೩ | ಕೌಪಿನ | ಕೌಪೀನ |
| ೮೬ | ೧೪ | ಯುದ್ಧದಿ | ಯುದ್ಧದಿ |
| ೮೮ | ೨೦ | ಲಕ್ಷ್ನೀಶ | ಲಕ್ಷ್ಮೀಶ |
| ೮೯ | ೧೪ | ಗುರುಪೆ | ಗುರುವೆ |
| ೯೦ | ೧೯ | ದಾನನರಂಜಿಕಿ | ದಾನವರಂಜಿಕಿ |
| ೯೧ | ೬ | ಜರಕಮಂಡುಲ | ಧರಕಮಂಡುಲ |
| ೯೧ | ೧೧ | ಕಂಜರಾಂಕಿತ | ಕಂಧರಾಂಕಿತ |
| ೯೪ | ೧೧ | ಲಕ್ಷ್ನೀರಮಣ | ಲಕ್ಷ್ಮೀರಮಣ |
| ೯೪ | ೧೫ | ತ್ರಿಜಗೆ | ತ್ರಿಜಗ |
| ೯೫ | ೫ | ಅವಮಾನವ | ಆವಮಾನವ |
| ೯೬ | ೨೦ | ಆತನೆಂತ್ತೈತಿ | ಆತನೆಂತ್ಯೈತಿ |
| ೧೧೮ | ೮ | ಶಭಮಾತಿ | ಶುಭಮಾತಿ |

|| ಹರಿಃ ಓಂ ||

ಶ್ರೀ ಲಕ್ಷ್ಮೀನರಸಿಂಹಾಯನಮಃ.



# ಶ್ರೀ ರಾಘವೇಂದ್ರಗುರುಸಾರ್ವಭೌಮ.

## || ಪ್ರಾರ್ಥನಾ ||

ಅಷ್ಟೈಶ್ವರ್ಯ **ಸಮಾಯುಕ್ತಂ** ರಮಯಾಸಹಿತಂ ಪ್ರಭುಂ। ಶ್ವೇತಾಬ್ಜಸ್ಥಂ ಕರೇಪದ್ಮಂ ಗದಿನಂ ಶಂಖಚಕ್ರಿಣಮ್ || ಶುದ್ಧಸ್ಫಟಿಕ ಸಂಕಾಶಂ ಸರ್ವಾಭರಣ ಭೂಷಿತಂ। ವನಮಾಲಾಧರಂ ದೇವಂ ಧ್ಯಾಯೇ **ನ್ನಾರಾಯಣಂ ಹರಿಂ** ||೧|| ಶ್ರೀಶಾಂಘ್ರಿ ಭಕ್ತಿಂ ಹರಿದಾಸದಾಸ್ಯಂ ಪ್ರಪನ್ನಮಂತ್ರಾರ್ಥ, ದೃಢೈಕನಿಷ್ಠಾಂ || ಗುರೋಃ ಸ್ಮೃತಿಂ ನಿರ್ಮಲಬೋಧಬುದ್ಧಿಂ ಪ್ರದೇಹಿ ಮೇತೇ ಪರಮಂ **ಪದಂಶ್ರೀಃ** || ೨ || ಅಭ್ರಮಂ ಭಂಗರಹಿತ ಮಜಡಂ ವಿಮಲಂಸದಾ || **ಆನಂದತೀರ್ಥ ಮತುಲಂ** ಭಜೇ ತಾಪತ್ರ ಯಾಪಹಂ || ೩ || ಶ್ರೀ ಮಧ್ವಸಂಸೇವನ ಲಬ್ಧಶುದ್ಧ । ವಿದ್ಯಾಸುಧಾಂಭೋನಿಧಯೋಽಮಲಾಯೇ || ಕೃಪಾಲವಃ **ಪಂಕಜನಾಭ ತಿರ್ಥಾಃ** । ಕೃಪಾಲವಸ್ಯಾನ್ಮಯಿನಿತ್ಯಮೇಷಾಂ || ೪ || ಭೂದೇವೀತನಯಾಸಕ್ತ ರಕ್ಷ್ವೀಶಪದಮಾನಸಃ || **ನೃಹರ್ಯಾಖ್ಯ** ಗುರುರ್ಭೂಯಾದಸ್ಮದಿಷ್ಟಾರ್ಥ ಸಿದ್ಧಯೇ || ೫ || ಮಾಧವಾಂಘ್ರಿ ಯುಗಾಸಕ್ತಾಃ **ಮಾಧವಾಖ್ಯ** ಮುನೀಶ್ವರಾಃ || ಅಭೃಥು ಮಧ್ವತೀರ್ಥಂ ಯೇ ದದುಸ್ತೇಽಭೀಷ್ಟ ಸಂತತಿಂ ||೬|| ಶ್ರೀಮದ್ರಮಾರಮಣ ಸದ್ಗಿರಿ ಪಾದಸಂಗಿವ್ಯಾಖ್ಯಾ । ನಿನಾದ ದಲಿತಾಖಿಲ ದುಷ್ಟದರ್ಪಂ || ದುರ್ವಾದಿವಾರಣ ವಿದಾರಣ ದಕ್ಷದೀಕ್ಷ । **ಮಕ್ಷೋಭ್ಯ ತೀರ್ಥ** ಮೃಗರಾಜ ಮಹನ್ನಮಾಮಿ ||೭ || ಶ್ರೀಮನ್ನ್ಯಾಯ ಸುಧಾಯೇನ ನಿರ್ಮಿತಾ ಧೀಮತಾಮತಾ || ತಂಜ್ಞಾನಾದಿಗುಣೋಪೇತಂ **ಜಯತೀರ್ಥ**

ಗುರುಂಭಜೇ ||೮|| ಯದ್ವೃಂದಾವನ ಸೇವಯಾಸುಧಿಮುಲಾಂ | ವಿದ್ಯಾಂ ಪಶುಂ ಸಂತತಿಂ | ಧ್ಯಾನಾಜ್ಞಾನಮನಲ್ಪ ಕೀರ್ತಿನಿವಹಂ | ಪ್ರಾಪ್ನೋತಿ ಶೀಘ್ರಂಜನಃ || ತಂ ವಂದೇ ನರಸಿಂಹತೀರ್ಥ ನಿಲಯಂ ಶ್ರೀ ವ್ಯಾಸರಾಟ್ **ಪೂ**ಜಿತಂ | ಧ್ಯಾಯಂತಂ ಮನಸಾ ನರಸಿಂಹಚರಣಂ **ಶ್ರೀಪಾದ ರಾಜಂ ಗುರುಂ** || ೯ || ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿ ಗಜಕೇಸರೀ || **ವ್ಯಾಸತೀರ್ಥ ಗುರು**ರ್ಭೂಯಾದಸ್ಮದಿಷ್ಟಾರ್ಥ ಸಿದ್ಧಯೇ || ೧೦ || ತಪೋವಿದ್ಯಾ ವಿರಕ್ತ್ಯಾದಿಸದ್ಗುಣೌಘಾಕರಾನಹಂ || **ವಾದಿರಾಜಗುರೂನ್** ವಂದೇಹಯಗ್ರೀವ ದಯಾಶ್ರಯಾನ್ || ೧೧ || ಮೂಕೋಽಪಿಯತ್ಪ್ರಸಾದೇನ ಮುಕುಂದ ಶಯನಾಯತೇ || ರಾಜರಾಜಾಯತೇರಿಕ್ತೋ ರಾಘವೇಂದ್ರ ತಮಾಶ್ರಯೇ || ೧೨ ||



| ಹರಿಃ ಓಂ ||

|| ಶ್ರೀ ಗುರುಭ್ಯೋನಮಃ ||

# ಶ್ರೀ ರಾಘವೇಂದ್ರ ಸ್ತೋತ್ರಮ್.

ಶ್ರೀಪೂರ್ಣಬೋಧ ಗುರುತೀರ್ಥಪಯೋಬ್ಧಿಪಾರಾ ಕಾಮಾರಿಮಾಕ್ಷ ವಿಷಮಾಕ್ಷಶಿರಃ ಸ್ಪೃಶಂತೀ | ಪೂರ್ವೋತ್ತರಾಮಿತತರಂಗಚರತ್ಸುಹಂಸಾ ದೇವಾಲಿಸೇವಿತ ಪರಾಂಘ್ರಿಪಯೋಜಲಗ್ನಾ || ೧ || ಜೀವೇಶಭೇದ ಗುಣಪೂರ್ತಿಜಗತ್ಸುಸತ್ವ ನೀಚೋಚ್ಚಭಾವ ಮುಖನಕ್ರಗಣೈಸ್ಸಮೇತಾ | ದುರ್ವಾದ್ಯಜಾಪತಿಗಿಲೈರ್ಗುರುರಾಘವೇಂದ್ರ ವಾಗ್ದೇವತಾಸರಿದಮುಂ ವಿಮಲೀಕರೋತು || ೨ || ಶ್ರೀರಾಘವೇಂದ್ರಃ ಸಕಲಪ್ರದಾತಾ ಸ್ವಪಾದ ಕಂಜದ್ವಯಭಕ್ತಿಮದ್ಭ್ಯಃ | ಅಘಾದ್ರಿಸಂಭೇದನದೃಷ್ಟಿವಜ್ರಃ ಕ್ಷಮಾಸುರೇಂದ್ರೋಽವತು ಮಾಂ ಸದಾಯಮ್ || ೩ || ಶ್ರೀರಾಘವೇಂದ್ರೋ ಹರಿಪಾದಕಂಜನಿಷೇವಣಾಲ್ಲಬ್ಧ ಸಮಸ್ತಸಂಪತ್ | ದೇವಸ್ವಭಾವೋದಿವಿಜದ್ರುಮೋಽಯಮಿಷ್ಟಪ್ರದೋ ಮೇ ಸತತಂ ಸ ಭೂಯಾತ್ || ೪ || ಭವ್ಯ

ಸ್ವರೂಪೋ ಭವದುಃಖತೂಲಸಂಘಾಗ್ನಿ ಚರ್ಯಃ ಸುಖಧೈರ್ಯಶಾಲೀ । ಸಮಸ್ತ ದುಷ್ಟಗ್ರಹ ನಿಗ್ರಹೇಶೋ ದುರತ್ಯಯೋಽಪಪ್ಲವ ಸಿಂಧುಸೇತುಃ ॥ ೫ ॥ ನಿರಸ್ತದೋಷೋ ನಿರವದ್ಯವೇಷಃ ಪ್ರತ್ಯರ್ಥಿಮೂಕತ್ವನಿದಾನಭಾಷಃ । ವಿದ್ವತ್ಪರಿಜ್ಞೇಯ ಮಹಾವಿಶೇಷೋ ವಾಗ್ವೈಖರೀನಿರ್ಜಿತ ಭವ್ಯಶೇಷಃ ॥ ೬ ॥ ಸಂತಾನಸಂಪತ್ಪರಿಶುದ್ಧಭಕ್ತಿವಿಜ್ಞಾನವಾಗ್ದೇಹಸುಪಾಟವಾದೀನ್ ॥ ದತ್ವಾ ಶರೀರೋತ್ಥ ಸಮಸ್ತದೋಷಾನ್ ಹತ್ವಾ ಸ ನೋಽವ್ಯಾದ್ಗುರು ರಾಘವೇಂದ್ರಃ ॥ ೭ ॥ ಯತ್ಪಾದೋದಕ ಸಂಚಯಃ ಸುರನದೀಮುಖ್ಯಾಪಗಾಸಾದಿತಾ ಸಂಖ್ಯಾನುತ್ತಮ ಪುಣ್ಯಸಂಘವಿಲಸತ್ಪ್ರಖ್ಯಾತ ಪುಣ್ಯಾವಹಃ । ದುಸ್ತಾಪತ್ರಯನಾಶನೋ ಭುವಿ ಮಹಾವಂಧ್ಯಾಸುಪುತ್ರಪ್ರದೋ ವ್ಯಂಗಸ್ವಂಗಸಮೃದ್ಧಿದೋ ಗ್ರಹಮಹಾಪಾಪಾಪಹಸ್ತಂ ಶ್ರಯೇ ॥ ೮ ॥ ಯತ್ಪಾದಕಂಜರಜಸಾ ಪರಿಭೂಷಿತಾಂಗಾ ಯತ್ಪಾದಪದ್ಮಮಧುಪಾಯಿತಮಾನಸಾ ಯೇ । ಯತ್ಪಾದಪದ್ಮಪರಿಕೀರ್ತನಜೀರ್ಣವಾಚಸ್ತದ್ದರ್ಶನಂ ದುರಿತಕಾನನದಾವಭೂತಮ್ ॥ ೯ ॥ ಸರ್ವತಂತ್ರಸ್ವತಂತ್ರೋಽಸೌ ಶ್ರೀಮಧ್ವಮತವರ್ಧನಃ । ವಿಜಯೀಂದ್ರಕರಾಬ್ಜೋತ್ಥಸುಧೀಂದ್ರವರಪುತ್ರಕಃ ॥ ೧೦ ॥ ಶ್ರೀರಾಘವೇಂದ್ರೋ ಯತಿರಾಡ್ ಗುರುರ್ಮೇಸ್ಯಾದ್ಭಯಾಪಹಃ । ಜ್ಞಾನಭಕ್ತಿಸುಪುತ್ರಾಯುರ್ಯಶಃ ಶ್ರೀಪುಣ್ಯವರ್ಧನಃ ॥ ೧೧ ॥ ಪ್ರತಿವಾದಿಜಯಸ್ವಾಂತಭೇದಚಿನ್ಹಾದರೋ ಗುರುಃ । ಸರ್ವವಿದ್ಯಾಪ್ರವೀಣೋಽನ್ಯೋ ರಾಘವೇಂದ್ರಾನ್ನ ವಿದ್ಯತೇ ॥ ೧೨ ॥ ಅಪರೋಕ್ಷೀಕೃತ ಶ್ರೀಶಃ ಸಮುಪೇಕ್ಷಿತಭಾವಜಃ । ಅಪೇಕ್ಷಿತ ಪ್ರದಾತಾನ್ಯೋ ರಾಘವೇಂದ್ರಾನ್ನವಿದ್ಯತೇ ॥೧೩॥ ದಯಾದಾಕ್ಷಿಣ್ಯವೈರಾಗ್ಯವಾಕ್ಪಾಟವಮುಖಾಂಕಿತಃ । ಶಾಪಾನುಗ್ರಹ ಶಕ್ತೋಽನ್ಯೋ ರಾಘವೇಂದ್ರಾನ್ನ ವಿದ್ಯತೇ ॥೧೪॥ ಅಜ್ಞಾನವಿಸ್ಮೃತಿ ಭ್ರಾಂತಿಸಂಶಯಾಪಸ್ಮೃತಿಕ್ಷಯಾಃ। ತಂದ್ರಾಕಂಪವಚಃಕೌಂಠ್ಯಮುಖಾ ಯೇಚೇಂದ್ರಿಯೋದ್ಭವಾಃ। ದೋಷಾಸ್ತೇನಾಶಮಾಯಾಂತಿ ರಾಘವೇಂದ್ರ ಪ್ರಸಾದತಃ ॥ ೧೫ ॥ ಓಂ ಶ್ರೀರಾಘವೇಂದ್ರಾಯ ನಮಃ ಇತ್ಯಷ್ಟಾಕ್ಷರಮಂತ್ರತಃ ॥ ಜಪಿತಾದ್ಭಾವಿತಾನ್ನಿತ್ಯಮಿಷ್ಟಾರ್ಥಾಃ ಸ್ಯುರ್ನ ಸಂಶಯಃ ॥ ೧೬ ॥ ಹಂತು ನಃ ಕಾಯಜಾನ್ ದೋಷಾನಾತ್ಮಾ

ತ್ಮೀಯಸಮುದ್ಭವಾನ್ ॥ ಸರ್ವಾನಪಿ ಪುಮರ್ಥಾಂಶ್ಚ ದದಾತು ಗುರುರಾತ್ಮವಿತ್ ॥ ೧೭ ॥ ಇತಿಕಾಲತ್ರಯೇ ನಿತ್ಯಂ ಪ್ರಾರ್ಥನಾಂಯಃ ಕರೋತಿ ಸಃ ॥ ಇಹಾಮುತ್ರಾಪ್ತಸರ್ವೇಷ್ಟೋ ಮೋದತೇ । ನಾತ್ರಸಂಶಯಃ ॥೧೮॥ ಅಗಮ್ಯಮಹಿಮಾ ಲೋಕೇ ರಾಘವೇಂದ್ರೋ ಮಹಾಯಶಾಃ ॥ ಶ್ರೀಮಧ್ವಮತದುಗ್ಧಾಬ್ಧಿ ಚಂದ್ರೋಽವತು ಸದಾನಘಃ ॥ ೧೯ ॥ ಸರ್ವಯಾತ್ರಾಫಲಾವಾಪ್ತ್ಯೈಯಥಾಶಕ್ತಿ ಪ್ರದಕ್ಷಿಣಮ್ । ಕರೋಮಿ ತವಸಿದ್ಧಸ್ಯ ವೃಂದಾವನಗತಂ ಜಲಮ್ । ಶಿರಸಾ ಧಾರಯಾಮ್ಯದ್ಯ ಸರ್ವತೀರ್ಥಫಲಾಪ್ತಯೇ ॥ ೨೦ ॥ ಸರ್ವಾಭೀಷ್ಟಾರ್ಥಸಿದ್ಧ್ಯರ್ಥಂ ನಮಸ್ಕಾರಂ ಕರೋಮ್ಯಹಮ್ । ತವ ಸಂಕೀರ್ತನಂ ವೇದಶಾಸ್ತ್ರಾರ್ಥಜ್ಞಾನಸಿದ್ಧಯೇ ॥ ೨೧ ॥ ಸಂಸಾರೇಽಕ್ಷಯಸಾಗರೇ ಪ್ರಕೃತಿತೋಽಗಾಧೇ ಸದಾ ದುಸ್ತರೇ ಸರ್ವಾವದ್ಯಜಲಗ್ರಹೈರನುಪಮೈಃ । ಕಾಮಾದಿ ಭಂಗಾಕುಲೇ । ನಾನಾವಿಭ್ರಮದುರ್ಭ್ರಮೇಽಮಿತಭಯಸ್ತೋಮಾದಿಫೇನೋತ್ಕಟೇ ದುಃಖೋತ್ಕೃಷ್ಟವಿಷೇ ಸಮುದ್ಧರ ಗುರೋ ಮಾಂ ಮಗ್ನರೂಪಂ ಸದಾ ॥೨೨॥ ರಾಘವೇಂದ್ರಗುರುಸ್ತೋತ್ರಂ ಯಃ ಪಠೇದ್ಭಕ್ತಿಪೂರ್ವಕಮ್। ತಸ್ಯ ಕುಷ್ಠಾದಿ ರೋಗಾಣಾಂ ನಿವೃತ್ತಿಸ್ತ್ವರಯಾಭವೇತ್ ॥ ೨೩ ॥ ಅಂಧೋಽಪಿ ದಿವ್ಯದೃಷ್ಟಿಃ ಸ್ಯಾದೇಡಮೂಕೋಪಿ ವಾಕ್ಪತಿಃ । ಪೂರ್ಣಾಯುಃ ಪೂರ್ಣಸಂಪತ್ತಿಃ ಸ್ತೋತ್ರಸ್ಯಾಸ್ಯ ಜಪಾದ್ಭವೇತ್ ॥ ೨೪ ॥ ಯಃ ಪಿಬೇಜ್ಜಲಮೇತೇನ ಸ್ತೋತ್ರೇಣೈವಾಭಿಮಂತ್ರಿತಮ್ । ತಸ್ಯ ಕುಕ್ಷಿಗತಾ ದೋಷಾಃ ಸರ್ವೇ ನಶ್ಯಂತಿ ತತ್ಕ್ಷಣಾತ್ ॥ ೨೫ ॥ ಯದ್ವೃಂದಾವನಮಾಸಾದ್ಯ ಪಂಗುಃ ಖಂಜೋಽಪಿ ವಾ ಜನಃ । ಸ್ತೋತ್ರೇಣಾನೇನ ಯಃ ಕುರ್ಯಾತ್ ಪ್ರದಕ್ಷಿಣನಮಸ್ಕೃತೀ ॥ ಸ ಜಂಘಾಲೋಭವೇದೇವ ಗುರುರಾಜಪ್ರಸಾದತಃ ॥ ೨೬ ॥ ಸೋಮಸೂರ್ಯೋಪರಾಗೇ ಚ ಪುಷ್ಯಾರ್ಕಾದಿ ಸಮಾಗಮೇ॥ಯೋಽನುತ್ತಮಮಿದಂ ಸ್ತೋತ್ರಮಷ್ಟೋತ್ತರಶತಂಜಪೇತ್ । ಭೂತಪ್ರೇತ ಪಿಶಾಚಾದಿಪೀಡಾ ತಸ್ಯ ನಜಾಯತೇ ॥ ೨೭ ॥ ಏತತ್ ಸ್ತೋತ್ರಂ ಸಮುಚ್ಚಾರ್ಯ ಗುರುವೃಂದಾವನಾಂತಿಕೇ । ದೀಪಸಂಯೋಜನಾಜ್ಞಾನಂ ಪುತ್ರಲಾಭೋ ಭವೇದ್ಧ್ರುವಮ್ ॥ ೨೮ ॥ ಪರವಾದಿಜಯೋ ದಿವ್ಯಜ್ಞಾನ ಭಕ್ತ್ಯಾದಿವರ್ಧನಮ್ ।

ಸರ್ವಾಭೀಷ್ಟಪ್ರವೃದ್ಧಿಃ ಸ್ಯಾನ್ನಾತ್ರ ಕಾರ್ಯಾವಿಚಾರಣಾ ॥ ೨೯ ॥ ರಾಜ ಚೋರಮಹಾವ್ಯಾಘ್ರಸರ್ಪನಕ್ರಾದಿಪೀಡನಮ್ । ನಜಾಯತೇಽಸ್ಯ ಸ್ತೋತ್ರಸ್ಯ ಪ್ರಭಾವಾನ್ನಾತ್ರ ಸಂಶಯಃ ॥ ೩೦ ॥ ಯೋ ಭಕ್ತ್ಯಾ ಗುರುರಾಘವೇಂದ್ರಚರಣದ್ವಂದಂ ಸ್ಮರನ್ ಯಃ ಪಠೇತ್ । ಸ್ತೋತ್ರಂ ದಿವ್ಯಮಿದಂ ಸದಾನಹಿ ಭವೇತ್ತಸ್ಯಾಸುಖಂ ಕಿಂಚನ । ಕಿಂ ತ್ವಿಷ್ಟಾರ್ಥಸಮೃದ್ಧಿರೇವ ಕಮಲಾನಾಥ ಪ್ರಸಾದೋದಯಾತ್ಕೀರ್ತಿರ್ದಿಗ್ವಿದಿತಾ ವಿಭೂತಿರತುಲಾ ಸಾಕ್ಷೀಹಯಾಸ್ಯೋಽತ್ರಹಿ ॥ ೩೧ ॥ ಇತಿ ಶ್ರೀರಾಘವೇಂದ್ರಾರ್ಯಗುರುರಾಜಪ್ರಸಾದತಃ । ಕೃತಂಸ್ತೋತ್ರಮಿದಂ ಪುಣ್ಯಂ ಶ್ರೀಮದ್ಭಿರ್ಹ್ಯಪ್ಪಣಾಭಿಧೈಃ ॥ ೩೨ ॥ ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯಚ । ಭಜತಾಂ ಕಲ್ಪವೃಕ್ಷಾಯ ನಮತಾಂಕಾಮಧೇನವೇ ॥ ೧ ॥ ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ । ಶ್ರೀರಾಘವೇಂದ್ರಗುರವೇ ನಮೋಽತ್ಯಂತ ದಯಾಲವೇ ॥ ೨ ॥ ಶ್ರೀಸುಧೀಂದ್ರಾಬ್ಧಿಸಂಭೂತಾನ್ ರಾಘವೇಂದ್ರ ಕಲಾನಿಧೀನ್ ॥ ಸೇವೆಸುಜ್ಞಾನಸೌಖ್ಯಾರ್ಥಂ ಸಂತಾಪತ್ರಯಶಾಂತಯೇ ॥ ೩ ॥ ಅಘಂದ್ರಾವಯತೇಯಸ್ಮಾದ್ವೇಕಾರೋಂವಾಂಛಿತಪ್ರದಃ ॥ ರಾಘವೇದ್ರಯತಿಸ್ತಸ್ಮಾಲ್ಲೋಕೇಖ್ಯಾತೋಭವಿಷ್ಯತಿ ॥ ೪ ॥

ಇತಿಶ್ರೀ ಅಪ್ಪಣಾಚಾರ್ಯಕೃತ.

ಶ್ರೀ ರಾಘವೇಂದ್ರ ಸ್ತೋತ್ರಮ್ ಸಂಪೂರ್ಣಮ್.

—( * )—

ಹರಿಃ ಓಂ.

ಶ್ರೀರಾಘವೇಂದ್ರಗುರುಭ್ಯೋನಮಃ

**ಶ್ರೀ ಅಪ್ಪಣಾಚಾರ್ಯಕೃತ**

# ಶ್ರೀರಾಘವೇಂದ್ರಕವಚ ಪ್ರಾರಂಭಃ.

ಕವಚಂ ರಾಘವೇಂದ್ರಸ್ಯ ಯತೀಂದ್ರಸ್ಯ ಮಹಾತ್ಮನಃ ॥ ವಕ್ಷ್ಯಾಮಿ ಗುರುವರ್ಯಸ್ಯ ವಾಂಛಿತಾರ್ಥಪ್ರದಾಯಕಂ ॥ ೧ ॥ ಋಷಿರಸ್ಯಾಪ್ಪಣಾಚಾರ್ಯಃ ಛಂದೋನುಷ್ಟುಪ್ ಪ್ರಕೀರ್ತಿತಂ ॥ ದೇವತಾ ಶ್ರೀರಾಘವೇಂದ್ರ

ಗುರಿರಿಷ್ಟಾರ್ಥಸಿದ್ಧಯೇ ॥ ೨ ॥ ಅಷ್ಟೋತ್ತರಶತಂಜಾಪ್ಯಂ ಭಕ್ತಿಯುಕ್ತೇನ ಚೇತಸಾ । ಉದ್ಯತ್ಪ್ರದ್ಯೋತನದ್ಯೋತ್ ಧರ್ಮಕೂರ್ಮಾಸನೇಸ್ಥಿತಂ ॥ ೩ ॥ ಖದ್ಯಖದ್ಯೋತನದ್ಯೋತಂಪ್ರತಾಪಂ ರಾಮಮಾನಸಂ ॥ ಧೃತಕಾಷಾಯವಸನಂ ತುಲಸೀಹಾರವಕ್ಷಸಂ ॥ ೪ ॥ ದೋರ್ದಂಡ ವಿಲಸದ್ದಂಡ ಕಮಂಡಲುವಿರಾಜಿತಮ್ ॥ ಅಭಯಜ್ಞಾನ ಮುದ್ರಾಕ್ಷಮಾಲಾಸೀಲಕರಾಂಬುಜಂ ॥ ೫ ॥ ಯೋಗೀಂದ್ರವಂದ್ಯಪಾದಾಬ್ಜಂ ರಾಘವೇಂದ್ರ ಗುರುಂ ಭಜೇ ॥ ಶಿರೋರಕ್ಷತುಮೇನಿತ್ಯಂ । ರಾಘವೇಂದ್ರೋಽಖಿಲೇಷ್ಟದಃ ॥ ೬ ॥ ಪಾಪಾದ್ರಿಪಾಟನೇವಜ್ರಃಕೇಶಾನ್ ರಕ್ಷತುಮೇಸದಾ ॥ ಕ್ಷಮಾಸುರಗಣಾಧೀಶೋಮುಖಂರಕ್ಷತುಮೇಗುರುಃ ॥ ೭ ॥ ಹರಿಸೇವಾಲಬ್ಧ ಸರ್ವಸಂಪತ್ಫಾಲಂಮಮಾವತು॥ ದೇವಸ್ವಭಾವೋವತುಮೇದೃಶೋತತ್ವಪ್ರದರ್ಶಕಃ॥೮ ಇಷ್ಟಪ್ರದಾನೇಕಲ್ಪದ್ರುಃ ಶ್ರೋತ್ರೇಶ್ರುತ್ಯರ್ಥಭೋಧಕಃ॥ ಭವ್ಯಸ್ವರೂಪೋಮೇನಾಸಾಂ ಜಿಂಹ್ವಾಮೇಽವತುಭವ್ಯಕೃತ್ ॥ ೯ ॥ ಆಸ್ಯಂರಕ್ಷತುಮೇ ದುಃಖತೂಲಸಂಘಾಗ್ನಿಚರ್ಯಕಃ ॥ ಸುಖಧೈರ್ಯಾದಿಸುಗುಣೋಭ್ರುವೌ ಮೇಸದಾವತು ॥ ೧೦ ॥ ಓಷ್ಠೌರಕ್ಷತುಮೇಸರ್ವಗ್ರಹನಿಗ್ರಹಶಕ್ತಿಮಾನ್ । ಉಪಪ್ಲವೋದಧಿಸಂತಃ(ಸೇತುಂ)ದಂತಾನ್ ರಕ್ಷತುಮೇಸದಾ ॥೧೧॥ ನಿರಸ್ತದೋಷೋಮೇಪಾತುಕಪೋಲೌ ಸರ್ವಪಾಲಕಃ ॥ ನಿರವದ್ಯಮಹಾವೇಷಃ ಕಂಠಂಮೇಽವತು ಸರ್ವದಾ ॥ ೧೨ ॥ ಕರ್ಣಮೂಲೇತುಪ್ರತ್ಯರ್ಥಿಮೂಕತ್ವಾಕರವಾಙ್ಮಮ ॥ ಬಹುವಾದಿಜಯೀಪಾತು ಹಸ್ತೌಸತ್ತತ್ವವಾದಕೃತ್ ॥ ೧೩ ॥ ಕರೌರಕ್ಷತುಮೇವಿದ್ವತ್ಪರಿಜ್ಞೇಯವಿಶೇಷವಾನ್ ॥ ವಾಗ್ವೈಖರೀಭವ್ಯಶೇಷಜಯೀವಕ್ಷಸ್ಥಲಂಮಮ ॥ ೧೪ ॥ ಸತೀಸಂತಾನ ಸಂಪತ್ತಿ ಭಕ್ತಿಜ್ಞಾನಾದಿವೃದ್ಧಿಕೃತ್ ॥ ಸ್ತನೌರಕ್ಷತುಮೇನಿತ್ಯಂಶರೀರಾವದ್ಯಹಾನಿಕೃತ್ ॥ ೧೫ ॥ ಪುಣ್ಯವರ್ಧನ ಪಾದಾಬ್ಜಾಭಿಷೇಕ ಜಲಸಂಚಯಃ ॥ ನಾಭಿಂರಕ್ಷತುಮೇಪಾರ್ಶ್ವೌದ್ಯುನದೀತುಲ್ಯಸದ್ಗುಣಃ ॥೧೬॥ ಪೃಷ್ಟಂರಕ್ಷತುಮೇನಿತ್ಯಂ ತಾಪತ್ರಯ ವಿನಾಶಕೃತ್ ॥ ಕಟಿಂಮೇರಕ್ಷತು ಸದಾವಂಧ್ಯಾಸತ್ಪುತ್ರದಾಯಕಃ ॥ ೧೭ ॥ ಜಘನಂಮೇಽವತುಸದಾ ವ್ಯಂಗಸ್ವಾಂಗಸಮೃದ್ಧಿಕೃತ್ ॥ ಗುಹ್ಯಂರಕ್ಷತುಮೇಪಾಪಗ್ರಹಾದಿಷ್ಟವಿನಾಶ

ಕೃತ್ ॥ ೧೮ ॥ ಭಕ್ತಾಘವಿಧ್ವಂಸಕರ ನಿಜಮೂರ್ತಿ ಪ್ರದರ್ಶಕಃ ॥ ಮೂರ್ತಿವಾನ್ ಪಾತುಮೇರೋಮಾಂ ರಾಘವೇಂದ್ರೋಜಗದ್ಗುರುಃ ॥೧೯॥ ಸರ್ವತಂತ್ರಸ್ವತಂತ್ರೋSಸೌ ಜಾನುನೀಮೇಸದಾವತು ॥ ಜಂಘೇರಕ್ಷತು ಮೇನಿತ್ಯಂ ಶ್ರೀಮಧ್ವಮತವರ್ಧನಃ ॥ ೨೦ ॥ ವಿಜಯೀಂದ್ರಕರಾಬ್ಜೋತ್ಥ ಸುಧೀಂದ್ರವರಪುತ್ರಕಃ ॥ ಗುಲ್ಫೌ ಶ್ರೀರಾಘವೇಂದ್ರೋಮೇಯತಿರಾಟ್ ಸರ್ವದಾವತು ॥೨೧॥ ಪಾದೌರಕ್ಷತುಮೇಸರ್ವಭಯಹಾರಿ ಕೃಪಾನಿಧಿಃ । ಜ್ಞಾನಭಕ್ತಿಸುಪುತ್ರಾಯುರ್ಯಶಃ ಶ್ರೀಪುಣ್ಯವರ್ಧನಃ ॥ ೨೨ ॥ ಕರಪಾದಾಂಗುಲೀಃ ಸರ್ವಾಮಮಾವತುಜಗದ್ಗುರುಃ ॥ ಪ್ರತಿವಾದೀಜಯಸ್ವಾಂತಭೇದಚಿಸ್ನಾದರೋಗುರುಃ ॥ ೨೩ ॥ ನಖಾನವತುಮೇಸರ್ವಾನ್ ಸರ್ವಶಾಸ್ತ್ರವಿಶಾರದಃ ॥ ಅಪರೋಕ್ಷೀಕೃತಶ್ರೀಶಃ ಪ್ರಾಚ್ಯಾಂದಿಶಿಸದಾವತು ॥ ೨೪ ॥ ಸದಕ್ಷಿಣೇಚಾವತು ಮಾಂಸಮುಪೇಕ್ಷಿತಭಾವಜಃ ॥ .............................. । ಅಪೇಕ್ಷಿತಪ್ರದಾತಾಚ ಪ್ರತೀಚ್ಯಾಮವತು ಪ್ರಭುಃ ॥ ೨೫ ॥ ದಯಾದಾಕ್ಷಿಣ್ಯ ವೈರಾಗ್ಯ ವಾಕ್ಪಾಟವಮುಖಾಂಕಿತಃ ॥ ಸದೋದೀಚ್ಯಾಮವತುಮಾಂಶಾಪಾನುಗ್ರಹಶಕ್ತಿಮಾನ್ ॥ ೨೬ ॥ ನಿಖಿಲೇಂದ್ರಿಯದೋಷಘ್ನೋ ಮಹಾನುಗ್ರಹಕೃದ್ಗುರುಃ ॥ ಅಧಶ್ಚೋರ್ಧ್ವಂಚಾವತುಮಾಮಷ್ಟಾಕ್ಷರಮನೂದಿತಃ ॥ ೨೭ ॥ ಆತ್ಮಾತ್ಮೀಯಘರಾಶಿಘ್ನೋ ಮಾಂರಕ್ಷತುವಿದಿಕ್ಷುಚ ॥ ಚತುರ್ಣಾಂಚಪುಮರ್ಥಾನಾಂದಾತಾಪ್ರಾತಃಸದಾವತು ॥ ೨೮ ॥ ಸಂಗಮೇವತುಮಾಂನಿತ್ಯಂ ತತ್ತ್ವವಿತ್ ಸರ್ವಸೌಖ್ಯಕೃತ್ ॥ ಮಧ್ಯಾಹ್ನೇಗವ್ಯಮಹಿಮಾ ಮಾಂ, ರಕ್ಷತು ಮಹಾಯಶಃ ॥೨೯॥ ಮೃತಪೋತಪ್ರಾಣದಾತಾ । ಸಾಯಾಹ್ನೇಮಾಂಸದಾವತು ॥ ವೇದಿಸ್ಥಃ ಪುರುಷೋಜೀವಿನಿಶೀಥಂಪಾತುಮಾಂಗುರುಃ ॥ ೩೦ ॥ ವಹ್ನಿಸ್ಥಮಾಲಿಕೋದ್ಧರ್ತಾ ವಹ್ನಿತಾಪಾಸದಾವತು ॥ ಸಮಗ್ರಟೀಕಾವ್ಯಾಖ್ಯಾತಾ ಗುರರ್ಮೇ ವಿಷಯೇವತು ॥ ೩೧ ॥ ಕಾಂತಾರೇಅವತುಮಾಂನಿತ್ಯಂಭಾಟ್ಟ [ಭಾಷ್ಯ] ಸಂಗ್ರಹಕೃದ್ಗುರುಃ ॥ ಸುಧಾಪರಿಮಲೋದ್ಧರ್ತಾಸುಚ್ಛಂದಸ್ತುಸದಾವತು ॥ ೩೨ ॥ ರಾಜಚೋರವಿಷವ್ಯಾಧಿಯಾದೋವನ್ಯಮೃಗಾಧಿಭಿಃ ॥ ಅಪಸ್ಮಾರಾಪಹರ್ತಾನೋಶಾಸ್ತ್ರವಿತ್ ಸರ್ವದಾವತು ॥ ೩೩ ॥ ಗತೌಸರ್ವತ್ರಮಾಂನಾತು

ನಿಷದರ್ಥ(ಖಂಡ)ಕೃದ್ಗುರುಃ ॥ ಋಗ್ವ್ಯಾಖ್ಯಾನಕೃದಾಚಾರ್ಯಃ ಶ್ಚೈತೌರ ಕ್ಷತುಮಾಂಸದಾ ॥೩೪॥ ಮಂತ್ರಾಲಯನಿವಾಸೀಮಾಂ ಜಾಗ್ರತ್ಕಾಲೇಸದಾವತು ॥ ನ್ಯಾಯಮುಕ್ತಾವಲೀಕರ್ತಾಸ್ವಪ್ನೇರಕ್ಷತುಮಾಂಸದಾ ॥ ೩೫ ॥ ಮಾಂಪಾತು ಚಂದ್ರಿಕಾವ್ಯಾಖ್ಯಾಕರ್ತಾಸುಪ್ತಾಹಿ ತತ್ವಕೃತ್ ॥ ಸುತಂತ್ರ ದೀಪಿಕಾಕರ್ತಾಮುಕ್ತೌರಕ್ಷತುಮಾಂಗುರುಃ ॥ ೩೬ ॥ ಗೀತಾರ್ಥಸಂಗ್ರಹಃ ಕರ್ತಾ ಸದಾರಕ್ಷತುಮಾಂಗುರುಃ । ಶ್ರೀಮಧ್ವಮತದುಗ್ಧಾಬ್ಧಿ ಚಂದ್ರೋವತುಸದಾನಘಃ ॥೩೭॥ ಇತಿಶ್ರೀ ರಾಘವೇಂದ್ರಸ್ಯ ಕವಚಂ ಪಾಪನಾಶನಂ ॥ ಸರ್ವವ್ಯಾಧಿಹರಂಸದ್ಯಃ ಪಾವನಂ ಪುಣ್ಯವರ್ಧನಂ ॥ ೩೮ ॥ ಯ ಇದಂ ಪಠತೇನಿತ್ಯಂನಿಯಮೇನ ಸಮಾಹಿತಃ ॥ ಅದೃಷ್ಟಿಃಪೂರ್ಣದೃಷ್ಟಿಃ ಸ್ಯಾದೇಡಮೂಕೋಪಿವಾಕ್ಪತಿಃ ॥ ೩೯ ॥ ಪೂರ್ಣಾಯುಃ ಪೂರ್ಣಸಂಪತ್ತಿ ಭಕ್ತಿಜ್ಞಾನಾದಿವೃದ್ಧಿಕೃತ್ ॥ ಪೀತ್ವಾವಾರಿನರೋಯೇನಕವಚೇ ನಾಭಿಮಂತ್ರಿತಂ ॥ ೪೦ ॥ ಜಹಾತಿಕುಕ್ಷಿಗಾನ್ ರೋಗಾನ್ ಗುರುವರ್ಯ ಪ್ರಸಾದತಃ ॥ ಪ್ರದಕ್ಷಿಣ ನಮಸ್ಕಾರಾನ್ ಗುರೋರ್ವೃಂದಾವನಸ್ಯಯಃ ॥೪೧॥ ಕರೋತಿ ಪರಯಾಭಕ್ತ್ಯಾ ತದೇತತ್ ಕವಚಂಪಠನ್ ॥ ಪಂಗುಕೂಣಿಶ್ಚ ಪೌಗಂಡ ಪೂರ್ಣಾಂಗೋಜಾಯತೇಧ್ರುವಂ ॥ ೪೨ ॥ ಶೇಷಾಶ್ಚ ಕುಷ್ಟಪೂರ್ವಾಶ್ಚ । ನಶ್ಯಂತ್ಯಾಮಯರಾಶಯಃ। ಅಷ್ಟಾಕ್ಷರೇಣ ಮಂತ್ರೇಣಸ್ತೋತ್ರೇಣ ಕವಚೇನಚ ॥ ೪೩ ॥ ವೃಂದಾವನೇಸನ್ನಿಹಿತಮಭಿಷಿಚ್ಯ ಯಥಾವಿಧಿಃ ॥ ಯಂತ್ರೇಮಂತ್ರಾಕ್ಷರಾಣ್ಯಷ್ಟೌ ವಿಲಿಖ್ಯಾತ್ರ ಪ್ರತಿಷ್ಟಿತಂ ॥ ೪೪ ॥ ಷೋಡಶೈರುಪಚಾರೈಶ್ಚ ಸಂಪೂಜ್ಯ ತ್ರಿಜಗದ್ಗುರುಂ ॥ ಅಷ್ಟೋತ್ತರಶತಾಖ್ಯಾಭಿಃ ರರ್ಚಯೇತ್ಕುಸುಮಾದಿಭಿಃ ಫಲೈಶ್ಚವಿವಿಧೈರೇವ ಗುರೋರರ್ಚಾಂಪ್ರಕುರ್ವತಃ ॥ ನಾಮಶ್ರವಣಮಾತ್ರೇಣಗುರುವರ್ಯಪ್ರಸಾದತಃ ॥೪೬॥ ಭೂತಪ್ರೇತಪಿಶಾಚಾದ್ಯಾಃ ವಿದ್ರವಂತಿದಿಶೋದಶಃ ॥ ಪಠೇದೇತತ್ರಿಕಂ ನಿತ್ಯಂ ಗುರೋರ್ವೃಂದಾವನಾಂತಿಕೇ ॥೪೭॥ ದೀಪಸಂಯೋಜ್ಯ ಬ್ರಹ್ಮವಿದ್ವಾನ್ ಸಭಾಸುವಿಜಯೀಭವೇತ್ ॥ ರಾಜಚೋರಮಹಾವ್ಯಾಘ್ರ ಸರ್ಪನಕ್ರಾದಿ ಪೀಡನಂ ॥೪೮॥ ಕವಚಸ್ಯ ಪ್ರಭಾವೇನ ಭಯಂತಸ್ಯ ನಜಾಯತೇ॥ ಸೋಮಸೂರ್ಯೋಪರಾಗಾದಿಕಾಲೇ ವೃಂದಾವನಾಂತಿಕೇ ॥೪೯॥ ಕವಚಾದಿತ್ರಿಕಂ

ಪ್ರಣ್ಯ ಮಪ್ಪ ಸಾರ್ಯ-ದರ್ಶಿತಂ ॥ ಜಪೇದ್ಯಃ ಸಧನಂಪುತ್ರಾನ್ ಭಾರ್ಯಾಂಚ ಸುಮನೋರಮಾಂ ॥ ೫೦ ॥ ಜ್ಞಾನಭಕ್ತಿಂಚವೈರಾಗ್ಯಂಭುಕ್ತಿಂ (ಭಕ್ತಿಂ) ಮುಕ್ತಿಂಚಶಾಶ್ವತೀಂ ॥ ಸಂಪ್ರಾಪ್ಯಮೋದತೇನಿತ್ಯಂ ಗುರುವರ್ಯ ಪ್ರಸಾದತಃ ॥ ೫೧ ॥

ಇತಿಶ್ರೀಮದಪ್ಪಣಾಚಾರ್ಯವಿರಚಿತಂ ಶ್ರೀರಾಘವೇಂದ್ರಕವಚಂ ಸಮಾಪ್ತಮ್ ಶ್ರೀಗುರು ಮಧ್ವೇಶಾರ್ಪಣಮಸ್ತು.



॥ ಹರಿಃ ಓಂ ॥

॥ ಶ್ರೀ ಗುರುಭ್ಯೋನಮಃ ॥

**ಶ್ರೀಮದಪ್ಪಣಾಚಾರ್ಯಕೃತ.**

# ಶ್ರೀಮದ್ಗುರು ರಾಘವೇಂದ್ರಮಂಗಳಾಷ್ಟಕ.

ಶ್ರೀಮದ್ರಾಮ ಪದಾರವಿಂದಮಧುಪಃ ಶ್ರೀಮಧ್ವವಂಶಾಧಿಪಃ । ಸಚ್ಛಿಷ್ಯೋಡುಗಣೋಡುಪಃ ಶ್ರಿತಜಗದ್ಗೀರ್ವಾಣಸತ್ಪಾದಪಃ ॥ ಅತ್ಯರ್ಥಂಮನಸಾಕೃತಾಚ್ಯುತಜಪಃ ಪಾಪಾಂಧಕಾರಾತಪಃ ॥ ಶ್ರೀಮತ್ಸದ್ಗುರುರಾಘವೇಂದ್ರ ಯತಿರಾಟ್ ಕುರ್ಯಾಧ್ರುವಂ ಮಂಗಲಮ್ ॥ ೧ ॥

ಕರ್ಮಂದೀಂದ್ರಸುಧೀಂದ್ರಸದ್ಗುರು ಕರಾಂಭೋಜೋದ್ಭವಃಸಂತತಂ । ಪ್ರಾಜ್ಯಧ್ಯಾನವಶೀಕೃತಾಖಿಲಜಗದ್ವಾಸ್ತವ್ಯಲಕ್ಷ್ಮೀಧವಃ । ಸಚ್ಛಾಸ್ತ್ರಾತಿವಿದೂಷಕಾಖಿಲಮೃಷಾವಾದೀಭಕಂಠೀರವಃ । ಶ್ರೀಮತ್ಸದ್ಗುರುರಾಘವೇಂದ್ರ ಯತಿರಾಟ್ ಕುರ್ಯಾಧ್ರುವಂ ಮಂಗಲಮ್ ॥ ೨ ॥

ಸಾಲಂಕಾರಕಕಾವ್ಯನಾಟಕಕಲಾಕಾಣಾದಪಾತಂಜಲ । ತ್ರಯ್ಯರ್ಥಸ್ಮೃತಿಜೈಮಿನೀಯಕವಿತಾಸಂಗೀತಪಾರಂಗತಃ ॥ ವಿಪ್ರಕ್ಷತ್ರವಿಡಂಘ್ರಿಜಾತಮುಖರಾನೇಕಪ್ರಜಾಸೇವಿತಃ । ಶ್ರೀಮತ್ಸದ್ಗುರುರಾಘವೇಂದ್ರ ಯತಿರಾಟ್ ಕುರ್ಯಾಧ್ರುವಂ ಮಂಗಲಮ್ ॥ ೩ ॥

ರಂಗೋತ್ತುಙ್ಗತರಙ್ಗಮಙ್ಗಲಕರಶ್ರೀತುಙ್ಗಭದ್ರಾತಟ । ಪ್ರತ್ಯಸ್ಥದ್ವಿಜಪುಙ್ಗವಾಲಯಲಸನ್ಮಂತ್ರಾಲಯಾಖ್ಯೇಪುರೇ ॥ ನವ್ಯೇಂದ್ರೋಪಲ

ನೀಲಭವ್ಯಕರಸದ್ವೃನ್ದಾವನಾಂತರ್ಗತಃ । ಶ್ರೀಮತ್ಸದ್ಗುರುರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂಮಂಗಲಮ್ ॥ ೪ ॥

ವಿದ್ವದ್ರಾಜಶಿರಃಕಿರೀಟ ಖಚಿತಾನರ್ಘ್ಯೋರುರತ್ನಪ್ರಭಾ । ರಾಗಾಘೌಘಹಪಾದುಕದ್ವಯಚರಃ ಪದ್ಮಾಕ್ಷಮಾಲಾಧರಃ ॥ ಭಾಸ್ವದ್ದಣ್ಡಕಮಣ್ಡಲೂಜ್ವಲಕರೋರಕ್ತಾಮ್ಬರಾಡಮ್ಬರಃ। ಶ್ರೀಮತ್ಸದ್ಗುರುರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂಮಂಗಲಮ್ ॥ ೫ ॥

ಯದ್ವೃನ್ದಾವನಸಪ್ರದಕ್ಷಿಣನಮಸ್ಕಾರಾಭಿಷೇಕಸ್ತುತಿ । ಧ್ಯಾನಾರಾಧನಮೃದ್ವಿಲೇಪನಮುಖಾನೇಕೋಪಚಾರಾನ್ ಸದಾ । ಕಾರಙ್ಕಾರಮಭಿಪ್ರಯಾನ್ತಿ ಚತುರೋಲೋಕಾಃ ಪುಮರ್ಥಾನ್ ಸದಾ । ಶ್ರೀಮತ್ಸದ್ಗುರುರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ ಮಂಗಲಮ್ ॥ ೬ ॥

ವೇದವ್ಯಾಸಮುನೀಶಮಧ್ವಯತಿರಾಟ್ಟೀಕಾರ್ಯ ವಾಕ್ಯಾಮೃತಂ । ಜ್ಞಾತ್ವಾದ್ವೈತಮತಂ ಹಲಾಹಲಸಮಂ ತ್ಯಕ್ತ್ವಾ ಸಮಾಖ್ಯಾಪ್ತಯೇ । ಸಂಖ್ಯಾವತ್ಸುಖದಾಂ ದಶೋಪನಿಷದಾಂ ವ್ಯಾಖ್ಯಾಂ ಸಮಾಖ್ಯನ್ಮುದಾ । ಶ್ರೀಮತ್ಸದ್ಗುರುರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂಮಂಗಲಮ್ ॥೭॥

ಶ್ರೀಮದ್ವೈಷ್ಣವಲೋಕಜಾಲಕಗುರುಃ ಶ್ರೀಮತ್ಪರಿವ್ರಾಟ್ಭರುಃ । ಶಾಸ್ತ್ರೇದೇವಗುರುಃ ಶ್ರಿತಾಮರತರುಃ ಪ್ರತ್ಯೂಹಗೋತ್ರಸ್ವರುಃ ॥ ಚೇತೋತೀತಸಿರುಃ ತಥಾ ಜಿತವರುಃ ಸತ್ಸೌಖ್ಯಸಂಪತ್ಕರುಃ । ಶ್ರೀಮತ್ಸದ್ಗುರುರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ ಮಂಗಲಮ್ ॥ ೮ ॥

ಯಃ ಸಂಧ್ಯಾಸ್ವನಿಶಂ ಗುರೋರ್ವ್ರತಿಪತೇಃ ಸನ್ಮಂಗಲಸ್ಯಾಷ್ಟಕಂ । ಸದ್ಯಃ ಪಾಪಹರಂ ತ್ವಸೇವಿವಿದುಷಾಂ ಭಕ್ತ್ಯೈವಬಾಭಾಷಿತಂ ॥ ಭಕ್ತ್ಯಾವಕ್ತಿಸುಸಂಪದಂ ಶುಭಪದಂ ದೀರ್ಘಾಯುರಾರೋಗ್ಯಕಂ । ಕೀರ್ತಿಂಪುತ್ರಕಲತ್ರಬಾನ್ಧವಸುಹೃನ್ಮೂರ್ತೀಃ ಪ್ರಯಾತಿಧ್ರುವಂ ॥ ೯ ॥

ಇತಿ ಶ್ರೀಮದ್ರಾಘವೇಂದ್ರ ಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಯಾಮಿ ರಾಮನರಹರಿಕೃಷ್ಣಕೃಷ್ಣಾತ್ಮಕ ಚಕ್ರರೂಪಿ ನಾರಾಯಣಾತ್ಮಕ ಶ್ರೀಮನ್ಮೂಲ ರಾಮಾತ್ಮಕ ಮನ್ಧಾನದಾಮಕರ
ಶ್ರೀಕೃಷ್ಣಾರ್ಪಣಮಸ್ತು.

|| ಹರಿಃ ಓಂ ||

|| ಶ್ರೀಗುರುಭ್ಯೋನಮಃ ||

# ಗುರುಸಂತತಿ ಪೀಳಿಗೆ.

## [ ಜಗನ್ನಾಥವಿಠ್ಠಲ ]

### ೧ ಪದ—ರಾಗ—ಸಾವೇರಿ—ಝಂಪೆತಾಳ.

ಸ್ಮರಿಸಿ ಗುರುಸಂತತಿಯ ಸರ್ವಕಾಲಗಳಲ್ಲಿ । ಪೊರವಹರಿಚತುರವಿಧ ಪುರುಷಾರ್ಥಗಳಯಿತ್ತು । ಸ್ಮರಿಸಿ ಗುರುಸಂತತಿಯನು || ಪಲ್ಲ || ಪರಮ ಹಂಸಾಖ್ಯ ಹರಿ ಗುರು-ತಮ ನೆನೆಸುತಿಪ್ಪ । ಪರಮೇಷ್ಠಿ ತತ್ಸುತರುಸನಕಾದ್ಯರಾ || ಕರಕಮಲ ಸಂಜಾತ ದುರ್ವಾಸಜ್ಞಾನ ಸಿಧಿ । ಗರುಡವಾಹನ ತೀರ್ಥ ಕೈವಲ್ಯ ಯತಿವರರ ||೧|| ಜ್ಞಾನೇಶ ಪರತೀರ್ಥ ಸತ್ಯಪ್ರಜ್ಞಪ್ರಾಜ್ಞ । ಸೂನು ಸುತ್ರ ಪೋರಾಜ, ವರಕುಮಾರಾ || ಮೌನಿಕುಲವರ ಅಚ್ಯುತ ಪ್ರೇಕ್ಷಕರಂಘ್ರಿಗಳಿಗೆ । ನಮಿಪೆ ನನವರತಭಕ್ತಿಪೂರ್ವಕದಿ || ೨ || ಅಚ್ಯುತನ್ನ ಭಕ್ತ ಮರುತವತಾರ ಮಧ್ವಮುನಿ । ಪ್ರೋಚ್ಚಾಬ್ಜನಾಭ ನರಹರಿಮಾಧವಾ|| ಸಚ್ಚರಿತ ಅಕ್ಷೋಭ್ಯಮುನಿಪ ಪ್ರತಿವಾದಿಭೂ । ತೋಚ್ಚಾಟಣವ ಗೈದ ಜಯತೀರ್ಥಗುರುವರರ || ೩ || ವಿದ್ಯಾಧಿರಾಜರ ಕವೀಂದ್ರ ವಾಗೀಶ ಸ್ವ । ಸಿದ್ಧಾಂತ ಸ್ಥಾಪಿಸಿದ ರಾಮಚಂದ್ರ। ಅದ್ವೈತಮತ ಕುಮುದನೆನಿಪ ವಿಭು ದೇಂದ್ರಾರ್ಯ । ಸದ್ವೈಷ್ಣವಾಗ್ರಣಿ ಜಿತಾಮಿತ್ರ ಮುನಿವರರ || ೪ || ರಘುನಂದನ ಸುರೇಂದ್ರ ವಿಜಯೀಂದ್ರ ಸುಸುಧೀಂದ್ರ । ಸುಗುಣವಾರಿಧಿ ರಾಘವೇಂದ್ರಾರ್ಯರಾ || ನಿಗಮಾರ್ಥ ಕೋವಿದ ಸುಯೋಗೀಂದ್ರ ಸೂರೀಂದ್ರ । ಜಗತೀತಳದಿ ಸುಪ್ರಸಿದ್ಧ ಸುಮತೀಂದ್ರರಾ || ೧೫ || ಸಾಧು ಜನ ಸನ್ನುತ ಉಪೇಂದ್ರರಾಯರ ವೇದ । ವೇದಾಂಗಚತುರ ವಾದೀಂದ್ರ ಯತಿಯಾ । ಭೇದಮತ ವಾರಿನಿಧಿ ಚಂದ್ರ ವಸುಧೀಂದ್ರ ವಿ । ದ್ಯಾದಿನಾಸಕ್ತ ವರದೇಂದ್ರ ಯತಿವರರ || ೬ || ರಾಮ ವೇದವ್ಯಾಸರಂಘ್ರಿಯ ಕಮಲಗಳ ಹೃ । ತ್ತಾಮರಸದೊಳು ಪೂಜಿಸಿದ ಬಗೆಯನೂ || ಧೀಮಂತ

ರಿಗೆ ತಿಳುಪಲೋಸುಗದಿ ನವರತ್ನ । ಹೈಮ ಮಂಟಪ ವಿರಚಿಸಿದ ಭುವನೇಂದ್ರರಾ ॥ ೭ ॥ ಪವಮಾನಮತ ಪ್ರವರ್ತಕರೊಳುತ್ತಮರೆನಿಪ ಭುವನೇಂದ್ರ ಮುನಿಸುಬೋಧೇಂದ್ರ ಯತಿಯಾ । ಅವನಿತದೊಳಗೆ ಅಭ್ಯದಿಕರಸ ಮಾಡಿನ । ತ್ಕವಿಗಳನು ಸಂತೈಸಲೆಂದು ಸ್ಥಾಪಿಸಿದವರ ॥ ೮ ॥ ಹರಿಸಂಸ್ಮರಣೆ ಅಹರ್ನಿಶಿಗಳಲ್ಲಿ ಮಾಡಿಪ । ತ್ಸರಿಹರ ಗೈಸುವದು ಗುರುಗಳ ಸ್ಮೃತಿ ॥ ಪರಮ ಸೌಖ್ಯನಸೀವ ದಾವಾವ ಕಾಲದಲ್ಲ । ಪೊರವ ಜಗನ್ನಾಥ ವಿಠ್ಠಲ ಪೊಲಿದು ನಿತ್ಯ ॥ ೯ ॥

## ಪ್ರಾಣೇಶವಿಠ್ಠಲ.

### ೨ ಪದ—ರಾಗ—ಕೋಲುಸಪಧಾಟಿ—ಆದಿತಾಳ.

ನಾಭಿಸಂಭವ ಸಂತ । ತೀಭಕ್ತಿಂದಾರ್ಣಿನುವೆ ॥ ಈ ಭವಶರಧಿ ತ್ವರದಿಂದಕೋಲೆ ॥ ಈಭವಶರಧೀ ತ್ವರದಿಂದದಾಟಿಸಿ । ಶ್ರೀಭಾಗವತರ ಕೂಡಿಸಲಿ ಕೋಲೆ ॥ ಪಲ್ಲ ॥ ವಿಧಿಜಾತಸನಕಾದಿ ತದನಂತರ ದೂರ್ವಾಸ। ಅದರಿಂದೆ (ಅದರಿಂದ) ಜ್ಞಾನನಿಧಿಗಳಿಕೋಲೆ ॥ ಅದರಿಂದೆ ಜ್ಞಾನನಿಧಿಯು ಗರುಡವಾಹನ । ಬುಧರು ಕೈವಲ್ಯತೀರ್ಥರು ಕೋಲೆ ॥ ೧ ॥ ಜ್ಞಾನೇಶ ಪರತೀರ್ಥ ಮೌನೀಶ ಸತ್ಯಪ್ರಜ್ಞ । ದೀನವತ್ಸಲರು ಪ್ರಾಜ್ಞತೀರ್ಥಕೋಲೆ ॥ ದೀನವತ್ಸಲರು ಪ್ರಾಜ್ಞಸುತಪೊರಾಜ । ಜ್ಞಾನಿ ಅಚ್ಯುತಪ್ರೇಕ್ಷರುಕೋಲೆ ॥ ೨ ॥ ಕ್ಷಿತಿಯೊಳಗೆ ದುರ್ಮತ ಪತಿಶಯವಾದವೆಂದು । ಸ್ತುತಿಸಲು ಸುರರು ಮೊರೆಕೇಳಿಕೋಲೆ ॥ ಸ್ತುತಿಸಲು ಸುರರು ಮೊರೆಕೇಳಿ ಪಾಲಿಸಿದ । ಯತಿಶಿರೋಮಣಿಯಾಬಲಗೊಂಬೆಕೋಲೆ ॥ ೩ ॥ ಹರಿಸರ್ವೋತ್ತಮನಲ್ಲ ಬರಿದೇ ಈ ವಿಶ್ವವೆಲ್ಲ । ಎರಡಿಲ್ಲವೆಂದುಪೇಳೋರು ಕೋಲೆ ॥ ಎರಡಿಲ್ಲವೆಂದು ಪೇಳ್ವಮಾಯ್ಗಗಳಗೆದ್ದ । ಗುರುಮಧ್ವಮುನಿಗೆ ನಾಶರಣೆಂಬೆ ಕೋಲೆ ॥ ೪ ॥ ಮೂರುದೇವರು ಸಮ । ಆರುಮತಗಳೆಂಬ । ಘೋರವಾದಿಗಳ ನಯದಿಂದ ಕೋಲೆ ॥ ಘೋರವಾದಿಗಳ ನಯದಿಂದ ಸೋಲಿಸಿದ । ಭಾರತೀಪತಿಯಾ ಬಲಗೊಂಬೆಕೋಲೆ ॥ ೫ ॥ ಒಂದು

ಇಲ್ಲವು ಎಂಬೋವುಂದವುತಿಯುಮತ । ಒಂದೇಮಾತಿನಲ್ಲಿ ಗೆಲಿದರು ಕೋಲೆ ॥ ಒಂದೇಮಾತಿನಲಿ ಗೆಲಿದಂಥ ಶ್ರೀಮುದಾ । ಸಂದತೀರ್ಥರನ ಬಲಗೊಂಬೆಕೋಲೆ ॥ ೬ ॥ ನಾನಾದೇವರು ಎಂಬ ಹೀನಮತಗಳಿಲ್ಲ । ಜಾಣಕಿಯಲ್ಲ ಗೆಲಿದರು ಕೋಲೆ ॥ ಜಾಣಿಕಿಯಲ್ಲಿ ಗೆಲಿದಂಥ ಕುಲಗುರು । ಪ್ರಾಣದೇವರಿಗೆ ಶರಣೆಂಬೆ ಕೋಲೆ ॥ ೭ ॥ ಇಲ್ಲಿಮಾತ್ರವು ಭೇದ ಅಲ್ಲಿ ಒಂದೆಂಬುವ । ಖುಲ್ಲರನೆಲ್ಲ ಮುರಿದರು ಕೋಲೆ ॥ ಖುಲ್ಲರನೆಲ್ಲ ಮುರಿದ ಸದ್ಗುರುಪಾದ । ಪಲ್ಲವಗಳಿಗೆ ಶರಣೆಂಬೆ ಕೋಲೆ ॥ ೮ ॥ ತನುವೇನಾನೆಂಬುವ ಭಣಗೂ ಮತಗಳಿಲ್ಲ । ವಿನಯದಿಂದಲಿ ಗೆಲಿದರು ಕೋಲೆ ॥ ವಿನಯದಿಂದಲಿ ಗೆಲಿದಂಥ ಶ್ರೀಮಧ್ವ । ಮುನಿಯಪಾದಗಳ ಸ್ಮರಿಸುವೆ ಕೋಲೆ ॥ ೯ ॥ ಇಪ್ಪತ್ತೊಂದುಕುಭಾಷ್ಯ ತಪ್ಪನೆನಿಸೋಲಿಸಿದ । ಸರ್ವಜ್ಞರಯುಸನ ಪಾಲಿಸಿದ ಕೋಲ ॥ ಸರ್ವಜ್ಞರಯುಸನ ಪಾಲಿಸಿದ ಗುರುಗಳ । ತಪ್ಪದನೆನವೆನನುದಿನ ಕೋಲೆ ॥ ೧೦ ॥ ಈತನ ಮಹಿಮೆಯ ಭೂತನಾಥನರಿಯ । ನಾತುತಿನುಡಿಸೇ ಕಡೆಗಂಡು ಕೋಲೆ ॥ ನಾತುತಿನುಡಿಸೇ ಕಡೆಗಂಡು ಮರುತನ । ಮಾತುಮಾತಿಗೆ ಸ್ಮರಿಸಿರೊ ಕೋಲ ॥ ೧೧ ॥ ನರುವ ಕರ್ಮವುಮಾಡೆ ಮರುತಾಂತರಗ ತನೆಂದು । ಹರಿಗರ್ಪಿಸದಲ ಮುದದಿಂದ ಕೋಲೆ ॥ ಹರಿಗರ್ಪಿಸಿದಲೆ ಮುದದಿಂದ ಲಿರುವರು । ಸಿರಿಯುಭಾಗಿಗಳು ತಿಳಿವುದು ಕೋಲೆ ॥ ೧೨ ॥ ಈ ಸಮ್ಯಗ್ಗುರುಮುಚ್ಚಪೇನು ಸಾಧನಮಾಡಿ । ಪ್ರಾಣೇಶ ವಿಠಲನೊಲಿಸರು ಕೋಲೆ ॥ ಪ್ರಾಣೇಶವಿಠಲ ನೊಲಿಸುವಂಥ ಜಾಣರ । ನಾನೆಲ್ಲಿಕಾಣೆ ಜಗದೊಳು ಕೋಲೆ ॥ ೧೩ ॥

## ೩ ಪದ—ರಾಗ—ಭೈರವಿ—ಅಟ್ಟತಾಳ.

ಗುರುಗಳನನುದಿನನೆನೆವೆನಾ । ದುರಿತದಟ್ಟುಳಿನಾರೆಬಂದೀತಿನ್ನೇನಾ ॥ ಪಲ್ಲ ॥ ಪಾರ್ಥರಕ್ಷಕನ ನೀವಾರ್ಥ ಖಳರಕೊಂದು । ಕೀರ್ತಿಪಡೆದು ಸುಖತೀರ್ಥರೆಂತೆಂಬ ॥ ೧ ॥ ನೀವಾಲಿಸೆಂದೆನಲಾಪತ್ತು ಬಿಡಿಸುವ । ಮಾಪತಿ ನಿಜದೂತ ಶ್ರೀಪದ್ಮನಾಭ ॥ ೨ ॥ ಕರಿಪತಿಬಳಿಯಿಂದ ಧರಿಜ

ಪತಿಯತಂದು । ಗುರುಗಳಿಗಿತ್ತಿಹ ನರಹರಿತೀರ್ಥ ॥ ೩ ॥ ಬಾದರಾಯಣ ದಿವ್ಯಪಾದ ಜಲಜಭೃಂಗ । ಭೂದೇವವಂದಿತ ಮಾಧವತೀರ್ಥ ॥ ೪ ॥ ಇಕ್ಷುಚಾಪನ ವ್ಯಾಳಲಕ್ಷಿಯಿಲ್ಲದೆ ಬಲು । ಪೇಕ್ಷವಮಾಡಿದ ಅಕ್ಷೋಭ್ಯ ಮುನಿಪ ॥ ೫ ॥ ದಯಮಾಡಿರೆಂದು ವಿ । ನಯದಿಂದಭಜಿಪರ । ಬಯಕೆ ಪೂರೈಸುವ ಜಯತೀರ್ಥರೆಂಬ ॥ ೬ ॥ ಅದ್ವೈತ ಗಜಸಿಂಹ ಮಧ್ವಮ ತೋದ್ಭವ । ಸದ್ವೈಷ್ಣವರ ಪ್ರಿಯವಿದ್ಯಾಧಿರಾಜ ॥ ೭ ॥ ಸಂದೇಹವಿಲ್ಲದೆ ವಂದಿಪಜನರಾಶೆ । ತಂದುಕೊಡುವ ದಯಸಿಂಧು ಕವೀಂದ್ರ ॥ ೮ ॥ ರಾಗಾದಿವರ್ಜಿತ ಭಾಗವತರ ಪಾಲ । ಯೋಗಿಶಿರೋಮಣಿ ವಾಗೀಶಮು ನಿಪ ॥ ೯ ॥ ನಾರಿದ ಭಕತರ ಘೋರಿಪಅಘಗಳ । ದೂರ ಓಡಿಸುತಿಪ್ಪ ಶ್ರೀರಾಮಚಂದ್ರ ॥ ೧೦ ॥ ಕುಭವಮೊಳಿರುವರ ಸೊಬಗಿನಿಂದಲಿನೋಡಿ । ಅಭಯವಕೊಡುತಿಪ್ಪ ವಿಭುದೇಂದ್ರತೀರ್ಥ ॥ ೧೧ ॥ ಭ್ರಾಮಕಜನಶಿಕ್ಷ ಧೀಮಂತಜನಪಕ್ಷ । ಹೇಮವರ್ಣಾಂಗ ಜಿ । ತಾಮಿತ್ರ ಮುನಿಪ ॥ ೧೨ ॥ ಬಗೆಬಗೆಭಜಿಸಲು ಇಗಡಜನರ ನೊಲ್ಲ । ಬಗಿವಾನು ಸುಜನರ ರಘುನಂದ ನಾರ್ಯ ॥ ೧೩ ॥ ಪೊಂದಿದವರನೋಯದಂದದಿ ಸಲಹುವ । ಎಂದೆಂದು ಬಿಡ ಶ್ರೀಸುರೇಂದ್ರಾಖ್ಯಮುನಿಪ ॥ ೧೪ ॥ ನಿಜಭಕ್ತಿಯಲಿ ಪಾದ ಭಜಿ ಸುವ ಅಗಣಿತ । ಸುಜನರ ಸಲಹುವ ವಿಜಯೀಂದ್ರ ಮುನಿಪ ॥ ೧೫ ॥ ವೀಂದ್ರವಾಹನ ಯಾದ ವೇಂದ್ರಾಂಘ್ರಿಭಜಿಸುವ । ಸಾಂದ್ರಭಕ್ತಿಯಲಿಸು ಧೀಂದ್ರಾಖ್ಯಮುನಿಪ ॥ ೧೬ ॥ ಧಾರುಣಿಯೊಳಗತಿ । ಚಾರುವೃಂದಾ ವನ । ದೀರಾಜಿಸುತಿಪ್ಪ ಶ್ರೀರಾಘವೇಂದ್ರ ॥ ೧೭ ॥ ಶ್ಲಾಘಿತ ಗುಣನಿಧಿ ಮಾಗಧರಿಪುದಾಸ । ರಾಘವೇಂದ್ರರ ಪುತ್ರಯೋಗೀಂದ್ರತೀರ್ಥ ॥ ೧೮ ॥ ವೈರಾಗ್ಯಗುಣದಿಂದ ಮಾರಾರಿಯೆಂಬದಿ । ತೋರುವರನು ದಿನ ಸೂರೀಂದ್ರತೀರ್ಥ ॥ ೧೯ ॥ ಕುಮತವೆಂಬ ಗಣಿತತಿಮಿರವೋಡಿ ಸುವಲ್ಲಿ । ಕಮಲಾಪ್ತನಂತಿಹ್ಯ ಸುಮತೀಂದ್ರ ತೀರ್ಥ ॥ ೨೦ ॥ ಸಲ್ಲದಸುಖ ಗಳನೆಲ್ಲವು ಜರಿದು । ಶ್ರೀನಲ್ಲನಭಜಿಸಲು ಬಲ್ಲಉಪೇಂದ್ರಾ ॥ ೨೧ ॥ ಮೋದಮುನಿಮತ ಮಹೋದಧಿಚಂದ್ರ ವಿ । ದ್ಯಾದಿದಾನಾಸಕ್ತವಾದೀಂದ್ರ ತೀರ್ಥ ॥ ೨೨ ॥ ಬಿಸಿಜನಾಭನದೂತ ವಸುಧಿಯೊಳಗೆಖ್ಯಾತ । ಕಿಸಲ

ಯೋಪಮಪಾಪ ವಸುಧೀಂದ್ರತೀರ್ಥ ॥ ೨೩ ॥ ಪರಮತೋರಗವಿಪ । ಕರುಣಿವಿಗತಕೋಪ । ವರವೇದ ಸಕಲಾಪವರದೇಂದ್ರಭೂಪ ॥ ೨೪ ॥ ಸುವಿವೇಕಿಗಳಿಗಿಷ್ಟ ತವಕದಿಂದಲಿಯೀವ । ಕವಿಭಿರೀಡಿತವಾದ ಭುವನೇಂದ್ರತೀರ್ಥ ॥ ೨೫ ॥ ಶಬರೀವಲ್ಲಭನಂಘ್ರಿ ಅಬುಜಾಳಿ ಸೂರ್ಯಸ । ನ್ನಿಭವಾದಿಗಜಸಿಂಹ । ಸುಬೋಧೇಂದ್ರ ತೀರ್ಥ ॥ ೨೬ ॥ ಪ್ರಾಣೇಶ ವಿಠಲನ ಕಾಣಬೇಕಾದರೆ । ಈನಮ್ಮಗುರುಗಳ ಧ್ಯಾನಮಾಡಿರು ॥ ೨೭ ॥

## ವರದೇಶವಿಠಲ.

### ೪ ಪದ—ರಾಗ—ಭೈರವಿ—ಅಟ್ಟತಾಳ.

ಯತಿಗಳಸತತ ಸಂ । ತುತಿಸುವೆನಾ । ಅತಿತ್ವರಿತದಲಿ ದುರಿತವ ತರಿವೆನಾ ॥ ಪಲ್ಲ ॥ ವೇದತೀರ್ಥಾದಿ ಸುಬೋ । ಧೇಂದ್ರವರಿಯಂತ । ಮೋದದಿಂದಿವರ ಶ್ರೀಪಾದಕ್ಕೆನಮಿಸುವೆ ॥ ೧ ॥ ಅಜನಪಿತನವಾದ ಭಜಿಸುವಭಕುತರ । ನಿಜವಾಗಿಪಾಲಿಪ ಸುಜನೇಂದ್ರತೀರ್ಥ ॥ ೨ ॥ ಆನತ ಜನಪಾಪ ಕಾನನದಹಿಪ । ಕೃ । ಶಾನುವಂತಿಪ್ಪ ಸೇಜ್ಞಾನೇಂದ್ರತೀರ್ಥ ॥ ೩ ॥ ದುರ್ಮತಧ್ವಾಂತ ಸುಧರ್ಮಸಂಸ್ಥಾಪಕ । ಕರ್ಮಂದೀವರ ಶ್ರೀಸುಧರ್ಮೇಂದ್ರತೀರ್ಥ ॥ ೪ ॥ ಅಗಣಿತಮಹಿಮ ಮೂಜಗದೊಳು ಪ್ರಖ್ಯಾತ । ನಿಗಮಾಗಮಜ್ಞ ಶ್ರೀಸುಗುಣೇಂದ್ರತೀರ್ಥ ॥ ೫ ॥ ಸುಪ್ರಸಿದ್ಧ ಮುನಿ ವಿಪ್ರ ಸಮೂಹವ । ಕ್ಷಿಪ್ರದಿಪಾಲಿಪ ಸುಪ್ರಜ್ಞೇಂದ್ರಾಖ್ಯ ॥ ೬ ॥ ದೋಷವರ್ಜಿತ ಹರಿದಾಸಜನರಪ್ರಿಯ । ಶ್ರೀಶ ಪದಾರ್ಚಿತ ಶ್ರೀಸುಕೃತೀಂದ್ರ ॥ ೭ ॥ ಮೂಲೋಕವಿಖ್ಯಾತ ಶ್ರೀಲೋಲನಂಘ್ರಿ ಕೀಲಾಲಜಮಧುಪ । ಸುಶೀಲೇಂದ್ರಮುನಿಪ ॥ ೮ ॥ ವರದೇಶವಿಠಲನ ಪರಿಪರಿ ಪೂಜಿಪ ಪರಮಹಂಸರ ಪಾದಕ್ಕೆರಗಿ ಬಿನ್ನೈಪೆ ॥ ೯ ॥

* ಶ್ರೀಮಧ್ವೇಶಾರ್ಪಣಮಸ್ತು *



# ಶ್ರೀರಾಘವೇಂದ್ರರಾಯರ ಸ್ತೋತ್ರಪದಗಳು.

## ಶ್ರೀ ವಿಜಯವಿಠಲ.

### ೫ ಪದ—ರಾಗ—ಸಾವೇರಿ—ಆದಿತಾಳ.

ದುರಿತಾಜೀಮೂತವಾತ | ಪೊರಿಯ್ಯೈನಿಸಗೆ ನಿರುತ | ಶರಣಾರ್ಪೋಗುವೆನೀತ | ಕರವಪಿಡಿಯೋ ಪ್ರೀತ || ಧರುಣಿಯೊಳಗೆ ವಿಸ್ತರಿಸ ಬಲ್ಲವರಾರು | ಗುರುವೆ ನಿಜ ನಮಿತರ ಸುರತರುವೆ || ಪಲ್ಲ || ನಂಬಿದೆ ನಿನ್ನ ಪಾದಾ | ಂಬುಜವನುಗಾಲ | ಬೆಂಬಿಡದಲೆ ನಾನೆಂಬೋದು ಬಿಡಿಸಿಂದು | ಬೆಂಬಲವಾಗು ಆ | ರೆಂಬ ಖಳರಸೀಗು || ಇಂಬಾಗಿನೋಡು ದಿ | ವ್ಯಾಂಬಕದಿಂದವೇಗ | ಡಿಂಬಾರೋಪಿರೆ | ಡಂಬಕತನವೆಂದೆಂಬುದು ಕೊಡದಲೆ| ಸಂಭ್ರಮದಲಿ ಹಂ | ದೊಂಬಲ ಬಯಸುವಾ | ಹಂಬಲಿಗರ ಕೂಡ | ಇಂಬು ತೋರು ಬಲುಗಂಭೀರ ಕರುಣಿ || ೧ || ಎಣಿಗಾಣೆ ನಿಮಗೆ ಕುಂ | ಭಿಣಿಯೊಳಗೆಲ್ಲ ಯತಿ | ಮಣಿಯೆ ರಾಮವ್ಯಾಸರ | ಮಣಿ ಭೂಷಣಾ ಚರಣಾ | ಜನಿಸೆ ಪುಷ್ಪ ಮಿಷವಾ | ಮನಸಿಜ ಶರ ಭೀಮ | ಮನದಣಿ ಗುಣಿಸಿ ಯೊ | ದಿನವೊಪಲು ಪಿಡಿದು | ಜನುಮ ಜನುಮದ ಸಾಧನ ಫಲಿಸಿತು ಯೋ | ಚನೆಗೊಳಲ್ಯಾತಕೆ | ಅನುಮಾನ ಸಲ್ಲದು | ಘನತರ ಕೀರ್ತಿಯೋ | ಜನನೂರಾರಕೆ| ಯೆಣಿಕೆಯಿಲ್ಲದೆ ಮೆರವದಿನ ಪ್ರಭಾಕಾಯ || ೨ || ವರಪಜೆ ನರಿತೆಯಲ್ಲಿ ಸ್ಥಿರವಾಗಿಸಿಂದು ಕ್ಷಣಸುರರಿಂದಾರಾಧನೆ | ಸರಸರನೆ ಹಗಲು | ಇರಳು ಕೈಕೊಳುತ ವ | ಕ್ರ್ಯಾರಗಳ ಹರಿಸಿ ನುಂ| ದರ ವರಗಳ ನಿತ್ತು | ಚಿರಕಾಲ ಬಿಡದಲೆ ಪರವಾದಿಯ ಬಲ | ಉರದಲ್ಲಣ ಪೂತುರೆ ಸಂಧೇಂಪ್ರರ || ಕರಾರವಿಂದಜ | ಅರಸರಸರ | ಪ್ರಿಯ ವಿಜಯ ವಿಠಲನ | ಬಿರಿಯ ಪೊಯಿಸುವ ಧೀರಾ | ಗುರು ರಾಘವೇಂದ್ರ || ೩ ||

### ೬ ಪದ—ರಾಗ—ಮುಖಾರಿ—ಅಟ್ಟತಾಳ.

ರಾಘವೇಂದ್ರ ಗುರುರಾಯ ರಮಣೀಯ ಕಾಯ | ರಾಘವೇಂದ್ರ ಪಾದಾಂಬುಜ ಭೃಂಗಾ ಭವಭಯಭಂಗ || ಪಲ್ಲ || ನೋಡಿದೆ ನಿನ್ನ

ಮಹಿಮೆ । ಹಾಡಿ ಪಾಡುವೆನೊ ನಿತ್ಯ । ಆಡಿ ಕೊಂಡಾಡಲು ಬಲು ಗೂಢ ವಾಗಿದೆ । ನಾಡಿನೊಳಗೆವಮ್ಮ ಸ್ಮರಣೆಮಾಡಿದವ ಧನ್ಯಾಯನ್ನು । ಮೂಢ ಬುದ್ಧಿಯನು ಬಿಡಿಸು । ಕೂಡಿಸು ಸಜ್ಜನರೊಳಗೆ ॥ ೧ ॥ ನಾಮಾಭಿಮಾನಿ ವಿಡಿದು । ಉಮಾಪತಿ ಪರಿಯಂತ । ಈ ಮನ ಎರಗಲಿ ಯಾಮಯಾಮಕೆ। ಕಾಮಿಪೆ ಯಿದನೆ ಗುರುವೆ । ವಾಮದಕ್ಷಿಣ ಭಾಗ ಮಾರ್ಗ । ನೇಮ ತಪ್ಪ ದಂತೆ ತಿಳಿಸಿ । ಭ್ರಾಮ ಬುದ್ಧಿ ವೊಡಿಸುವದು ॥ ೨ ॥ ಚಿಂತಾಮಣಿ ಕಂಡಮೇಲೆ ಭ್ರಾಂತಿಗೊಳಿವ ವಿಷಯ । ಚಿಂತಿಸಿ ಬೇಡುವದು ಲೋಕಾಂ ತದ ಸುಖವು । ಇಂತು ಬಾಗಿ ನಿಂತು ಕೇಳುವಂತೆ ಮಾಡದಿರು ಕರುಣಿ । ಸಂತತ ನಿನ್ನಪಾದ ಕ್ರಾಂತನಾಗಿ ತುತಿಸುವೆ ॥ ೩ ॥ ನಾರಿನಾರಿಗೆ ಈ ಚಿತ್ರ ತಾರತಮ್ಯ ತತ್ವದ ವಿಚಾರಗೈದು ನಲಿದಾಡಿ । ಮೇರೆಯಿಲ್ಲದೆ ಕೋಶ ಇಂದಿರೇಶನ್ನ ಹೃ । ದ್ವಾರಿಜದೊಳು ನಿಲಿಸಿ । ಆರಾಧನೆಮಾ ಡುವ ವೈಕಾರಿಕ ಭಾಗ್ಯವೆ ಬರಲಿ ॥ ೪ ॥ ನಮೋನಮೋ ಯತಿರಾಜ ಮಮತೆ ರಹಿತ । ಅನುಪಮಚರಿತ ಚಾರುಹಾಸ ನೆನಿಪ ನಿನ್ನ । ಹೆಮ್ಮೆ ಯಿಂದಲಿ ಯಿಪ್ಪವರ । ಬೊಮ್ಮ ವಿಜಯವಿಠಲನಾ । ತುಮ್ಮದೊಳರ್ಚಿಪ ಜ್ಞಾನೋತ್ತುಮ ತುಂಗಭದ್ರವಾಸ ॥ ೫ ॥

## ೭ ಪದ—ರಾಗ—ಮಾರವ—ಅಟ್ಟತಾಳ.

ರಾಘವೇಂದ್ರ ಪಾವನಕಾಯ । ರಾಘವೇಂದ್ರ । ರಾಘವೇಂದ್ರ ದುರಿ । ತೌಘ ಪರಿಹರಿಸಿ । ರಾಘವೇಶನ ಪಾದ । ಮೌಘನುತಿಪ ಗುರು ॥ ಪಲ್ಲ ॥ ಶರಣುಪೊಕ್ಕೆನು ಇಂದು । ಕಿರಣ ಪೋಲುವ ಪಾದ ॥ ಸ್ಮರಣೆ ಪಾಲಿಸು ವದು । ಕರುಣದಿಂದಲಿ ಇಂದು ॥ ೧ ॥ ವ್ಯಾಕುಲ ಹರಿಸಿ ಕಾಮಕ್ರೋಧ ಓಡಿಸಿ । ಸಾಕುವದು ಎನ್ನನೇಕ ಮಹಿಮ ಗುರು ॥ ೨ ॥ ಸಿರಿ ವಿಜಯ ವಿಠಲ ಪರ ದೈವವೆ ಎಂದು ॥ ಸ್ಥಿರವಾಗಿ ಸ್ಥಾಪಿಸಿ ಮೆರದ ನಿರ್ಮಳ ಕಾಯ ॥ ೩ ॥

## ೮ ಪದ—ರಾಗ—ಭೈರವಿ—ತ್ರಾವಿಡಿತಾಳ.

ನೋಡಿದೆನು ಗುರುಗಳ ನೋಡಿದೆ । ನೋಡಿದೆನು ಗುರು ರಾಘವೇಂ ದ್ರರ ಮಾಡಿದೆನು ಭಕುತಿಯ ವಂದನೆ । ಬೇಡಿದೆನೊ ಕೊಂಡಾಡಿ ವರಗಳ

ಈಡು ಇಲ್ಲದ ಮೆರವ ಮಹಿಮೆಯ || ಪಲ್ಲ || ಮೊದಲು ಗಾಂಗೆಯ ಶೈಯಜನು ಈ ನದಿಯತೀರದಿ ಇಲ್ಲಿ ಯಾಗವ | ಮುದದಿ ರಚಿಸಿ ಪೂರೈಸಿ ಪೋಗಿರ | ಲದನೆ ತನ್ನೊಳಗರಿತು ತವಕದಿ | ಹೃದಯ ನಿರ್ಮಲರಾಗಿ ರಾಗದಿ| ಬುಧಜನರ ಸಮ್ಯಾಳದಲಿ ಸಿರಿ| ಸದನನಂಘ್ರಿಗಳ ನೆನೆದು ಕಳೆವರ ಉದಿತ ಭಾಸ್ಕರನಂತೆ [ಯಿಪ್ಪದು] ಇಟ್ಟದು || ೧ || ಅಲವಬೋಧ ಮಿಕ್ಕಾದ ಮುನಿಗಳು ಸಾಂಶರು ವಂದುರೂಪದಿ | ನೆಲೆಯಾಗಿ ನಿತ್ಯದಲಿ ಇಪ್ಪರು | ಒಲಿಸಿಕೊಳುತಲಿ ಹರಿಯ ಗುಣಗಳ | ತಿಳಿಸಿ ತಿಳಿವರು ತಮ ತಮಗಿಂದಧಿಕರಲಿ ಉಪದೇಶಮಾರ್ಗದಿ | ಕಲಿಯುಗದೊಳಗಿದೇ ಕೇವಲ ಕತ್ತಲೆಯ ಪರಿಸುವ ಸೊಬಗು ಸಂತತ || ೨ || ರಾಮ ನರಹರಿ ಕೃಷ್ಣ ಕೃಷ್ಣರ | ನೇಮದಿಂ ದೀಮೂರ್ತಿಗಳ ಪದ | ತಾಮರಸ ಭಜನೆಯನು ಮಾಡುವ | ಕೋಮಲಾಂಗನು ಕಠಿಣಪರವಾದಿ | ಸ್ತೋಮಗಳ ಮಹ ಮಸ್ತಕಾದ್ರಿಗೆ | ಭೂಮಿಯೊಳು ಪವಿಯೆನಿಸಿದಯತಿ | ಯಾಮಯಾಮಕೆ ಎಲ್ಲರಿಗೆ ಶುಭ | ಕಾಮಿತಾರ್ಥವ ಕರೆವ ನಂದನ || ೩ || ನೂರುಪರ್ವತ ವರುಷ ಬಿಡದಲೆ | ಚಾರು ವೃಂದಾವನದಲಿ ವಿ | ಸ್ತಾರ ಆರಾಧನೆಯು ತೊಲಗದೆ | ವಾರವಾರಕೆ ಆಗುತಿಪ್ಪದು | ಸಾರೆಕಾರುಣ್ಯದಲಿ ಲಕುಮಿ ನಾರಾಯಣ ತಾ ಚಕ್ರರೂಪದಿ | ಸಾರಿದವರಘ ಕಳೆದು | ಇವರಿಗೆ ಕೀರುತಿಯ ತಂದಿತ್ತದನುದಿನ || ೪ || ಮಿತವೆ ಎನದಿರಿ ಇಲ್ಲಿ ದಿನದಿನ | ಕತಿಶಯವೆ ಆಗುವದು ಭೂಸುರ | ತತಿಗೆ ಬೋಜನ ಕಥಾಶ್ರವಣ ಭಾ | ರತ ಪುರಾಣಗಳಿಂದ ಲೊಪ್ಪುತ | ಕ್ಷಿತಿಯೊಳಗೆ ಮಂತ್ರಾಲಯ ಗ್ರಾಮಕೆ ಪ್ರತಿ ಇಲ್ಲವೆಂದೆನಿಸಿ ಕೊಂಬೊದು | ಪತಿತಪಾವನ ವಿಜಯವಿಠಲನ | ತುತಿಸಿ ಕೊಳುತಲಿ ಮೆರವ ಮುನಿಗಳ || ೫ ||

## ೯ ಪದ—ರಾಗ—ಕಾಂಬೋದಿ—ಆದಿತಾಳ.

ಮಂತ್ರಾಲಯ ನಿವಾಸಾ ಉತ್ತಮ ಹಂಸ | ಸಂತಾಪ ಪರಿಹರಿಸಿ ಕೊಡು ಎನಗೆ ಲೇಸ || ಪಲ್ಲ || ಯತಿಗಳ ಶಿರೋರನ್ನ ಯೋಗ ಸಂಪನ್ನ | ಕ್ಷಿತಿಯೊಳಗೆ ನಿನಗೆ ಸರಿಗಾಣೆನೋ || ನುತಿಸುವೆ ಭಕ್ತಿಯಲಿ ಬಿಡದೆ

ಮುಕುತಿಯಲಿ ಸತತಾನಂದದಲಿಪ್ಪ । ಜ್ಞಾನವಿರಲಿ ತಪ್ಪ ॥ ೧ ॥ ಕಪಿಲ ತೀರ್ಥದಲ್ಲಿ ಕರಣ ಶುದ್ಧಿಯಲ್ಲಿ ತಪವಮಾಡುವ ಮೌನಿ ಸೌಮ್ಯ ಜ್ಞಾನಿ । ಜಪ ಶೀಲಾ ಗುಣಾಂಬುಧಿ ಪುಣ್ಯದ ಬುದ್ಧಿ । ಕೃಪೆಮಾಡಿಕೊಡು ಗುರುವೆ ಶಿಷ್ಯಸುರ ತರುವೆ ॥ ೨ ॥ ತಮೋಗುಣ ಕಾರ್ಯ ಪೋಗಲಾಡು ವ್ಯಾಪ್ತಿಯಾ ಶಮೆದಮೆಯುಲಿ ಉಳ್ಳ ಮಹಿಮಿಯಾ । ನಮಗೆ ಪೇಳುವಾ ವೇದಬಲ್ಲಾ ವಿನೋದ । ಸುಮನ ಸುಗಣವ ಮೆಚ್ಚಿ ದುರ್ಮತಕೆ ಕಿಚ್ಚಿ ॥ ೩ ॥ ಕಾಶಿ ಸೇತುವೆ ಮಧ್ಯ ಮೆರವಾ ಭೇದವಿ । ದ್ಯ ಸಜ್ಜನಕೆ ತಿಳುಪ ಮನಸು ನಿಲ್ಲಿಪೆ । ಪೋಷಿಸುವೆ ಅವರ ಅಟ್ಟುವ ಮಹದುರ ॥ ದೋಷವ ಕಳೆವಂಥ ವಿಮಲಬಲ ಶಾಂತ ॥ ೪ ॥ ವರಹಜ ತೀರದಲಿದ್ದ ಸುಪ್ರಸಿದ್ಧ । ಮರುತ ಮತಾಂಬುಧಿ ಸೋವ ನಿಸ್ಸೀಮಾ । ಸರಸಿಜ ಪತಿ ನಮ್ಮ ವಿಜಯ ವಿಠಲ ನಂಘ್ರಿ । ಸ್ಮರಿಸುವ ಸುಧೀಂದ್ರ ಸುತ ರಾಘವೇಂದ್ರ ॥ ೫ ॥

### ೧೦ ಪದ—ರಾಗ—ಸೌರಾಷ್ಟ್ರ—ತ್ರಿವಿಡಿತಾಳ.

ಪರಮ ಮಂಗಳಮೂರುತಿ ದಿವ್ಯಕೀರುತಿ । ಧರೆಯೊಳಗಿದೇ ವಾರುತಿ ॥ ಪಲ್ಲ ॥ ಕರುಣಾಪ-ಯೋನಿಧಿಯೆ ಕರವಪಿಡಿದು ಎನ್ನ । ಕರಣಶುದ್ಧನ ಮಾಡೋ । ಕರಿವೆ ಮಸ್ತಕಬಾಗಿ ॥ ೧ ॥ ರಾಘವೇಂದ್ರರಪಾದ । ಲಾಘವ ಮತಿಯಲ್ಲಿ । ಶ್ಲಾಘನಮಾಡಿದ । ಮಾಘಧರನ ಪ್ರೀಯಾ ॥ ೨ ॥ ನಿರುತ ಮಂತ್ರಾಲಯ ಪುರವಾಸ ಅಘನಾಶಾ । ಸಿರಿವಿಜಯ ವಿಠಲನ್ನ ಚರಣ ಭಜಿಪ ಗುರುವೆ ॥ ೩ ॥

## ಶ್ರೀ ವಾಸುದೇವವಿಠಲ.

### ೧೧ ಪದ—ರಾಗ—ಮುಖಾರಿ—ಝಂಪಿತಾಳ.

ಆನ್ಯಾಕ ಚಿಂತಿಸಲಿ । ಆನ್ಯಾಕೆ ಧೇನಿಸಲೀ ॥ ತಾನಾಗಿ ಶ್ರೀರಾಘವೇಂದ್ರ ಯತಿವೊಲಿದ ॥ ಪಲ್ಲ ॥ ಪೋರತನದವನು ಎರಡು ಥೆರೆಗಳಲ್ಲಿ । ದೂರಾಗಿ ಮೆರೆಯಲು ಅಲ್ಲವೆಂದು ॥ ಕಾರುಣ್ಯದಿಂದ ತಮ್ಮಯ ಗುರುತುಗಳು ತೋರಿ । ಧೀರ ತಾ ಕರವನ್ನು ಪಿಡಿದ ಬಳಿಕ ॥೧॥ ಜಗದೊಳು ಪದಾ

ರ್ಥಗಳು ಗುಣದಿ ಭುಂಜಿಸುವಂಗೆ | ಅಗದಂಕರನು ತಾನು ಬಳಿಗೆಬಂದೂ|| ಬಗೆಬಗೆಯಿಂದಲ್ಲಿ ಸುರಸ ಪದಾರ್ಥಗಳು | ಸೊಗಸಾಗಿ ಉಣಿಸಲು ಚಿಂತೆ ಉಂಟೆ ||೨|| ಪೂರ್ಣ ಜಲ ಹರುವ ವಾಹಿನಿ ಕಂಡು ಬೆದರುವಗೆ | ಕರ್ಣಧಾರನು ತಾನೆಬಂದು ನಿಂದು || ತೂರ್ಣದಲಿ ಕರಪಿಡಿದು ಹರಗೋಲ ವೊಳಗಿಟ್ಟು | ಘೂರ್ಣಿಸಲು ಅವನಿಗೆ ಚಿಂತೆ ಉಂಟೆ || ೩ || ತನ್ನಯ ಹಿತಾಹಿತವು | ತಾ ವಿಚಾರಿಸುವಂಗೆ | ಚನ್ನಾಗಿ ಪರಮಗುರು ತಾನೆಬಂದೂ || ಸನ್ಮಾರ್ಗವನು ತಾನೆಪೇಳುವೆನೆನಲು | ಇನ್ನು ಆಯಾಸ ಉಂಟೆ ಅವನಿಗೆ || ೪ || ಏಸು ಜನ್ಮದಲ್ಲಿ ಅರ್ಚಿಸಿದೆ ನಾಯಿನ್ನು | ವಾಸುದೇವ ವಿಠಲನ ಪದವ ಲೇಸಾಗಿ | ಈ ಸುಕೃತದಿಂದೆನ್ನ ಹರಿದಾಸ | ಈ ಸುಗುಣ ಗುರುರಾಯ ಎನಗೆ ವೊಲಿದ || ೫ ||

## ೧೨ ಪದ—ರಾಗ—ಯರಕಲಕಾಂಬೋಧಿ—ತ್ರಿವಿಡಿತಾಳ.

ಮರಮರೆ ಎನ್ನ ರಾಘವೇಂದ್ರ ಗುರುವೆ ಸಂಪನ್ನ | ಕರದು ಕಾಮಿತಗಳ ಕರವೆ ನಿಮಗೆಂದು || ಪಲ್ಲ || ದಾರಿತಪ್ಪಿ ಪೋಗುವ ಪೀರಾವೋರನ್ನ | ದಾರಿಯ ಪಿಡಿಸಿನ್ನು ಪುರವನ್ನು ತೋರಿಸಿ| (ಊ)ನಾರಿನ ವಳಗೆ ಅವನ ಆಗ ದೂರನೋಡುವರೆ | ದೋಷಗಳ ವಿಚಾರ ಮಾಡುವರೆ | ಧೀರರು ಪೊರೆಯುಲವನ ಪಾರುಗಾಣಿಪ ರಲ್ಲವೆ || ೧ || ಹಸಿದು ಪರಾನ್ನ ಕೇಳದಲೆ ದ್ವಿಜವರಿಯುನ್ನ ಶಿಶುವಿನ್ನನೋಡಿ ದಯದಿಂದ ಕರದಿನ್ನು | ಹಸಿದ್ಯಾಕೊ ಎಂದು ಪಾಕವಮಾಡಿ | ಹಸನಾಗಿ ತಂದು ಬಡಿಸುತ | ವಸರಾದಿಸಿಂದು ಅವನ ದೋಷ | ಪಸರಿಸಿ ಪುಣಿಸಾದ ಜನರುಂಟ ಧರೆಯೊಳು || ೨ || ಜಲಪಾನಾತುರನಾಗಿ ಜಲವಕೇಳದ ವಿಪ್ರ | ಕುಲ ತರುಳನ ನೋಡಿ ಕೃಪೆಯಿಂದ ಸುರನದಿ| ಜಲವೀವೆನೆಂದು ಬ್ಯಾಗನೆ ದಿವ್ಯ | ಕಲಶವುತಂದು ಬಾರೆಲೊ | ಬಲು ಆಲಸವ್ಯಾಕೆಂದು ನಿನ್ನಯ ಪಂಕ | ತೊಳಿಯೆ ಕೊಡುವೆನೆಂದು ತಡವ ಮಾಡುವರೆ || ೩ || ಸುಶರೀರ ತನವನ್ನು ಮನದಲ್ಲಿ ಬಯಸಿ ತಾ| ವುಸರದ ಮುನಿಯ ತನಯನು ಕಂಡು ತಾವಾಗಿ ಕುಶಲವುಕೇಳಿ | ದೇವತಾವೈದ್ಯ ಅಸಮರೆಂದ್ಹೇಳಿ | ಅವಗೆ ದಿವ್ಯ ರಸವನ್ನು ಪೇಳಿ ನಿನ್ನಲ್ಲಿದ್ದ |

ಕಿಸರು ಪೊರದರೆ ಕೊಡುವೆನೆಂದು ನುಡಿವರೆ ||೪|| ಆರ್ತಿಯ ಭಕುತನ್ನ ನೋಡೀಗ ನಿನ್ನದಿವ್ಯ | ಕೀರ್ತಿಯ ನೋಡಿಕೊ ವಾಸುದೇವ ವಿಠಲನ್ನ | ಮೂರ್ತಿಯ ಭಜಕ ಭಕ್ತರಭೀಷ್ಟಾ | ಪೂರ್ತಿಗೆ ಜನಕ | ನಿನ್ನಯಗುಣ | ಸ್ಫೂರ್ತಿಯುಳ್ಳನಕ.| ಪಾಪದ ಲೇಶ | ವಾರ್ತಿಯ ಎನಗೆಯಿಲ್ಲ ಎಂದು ನಿಶ್ಚೈಸಿದೆ || ೫ ||

## ಶ್ರೀ ಗೋಪಾಲವಿಠಲ

### ೧೩ ಪದ—ರಾಗ—ವಧನ್ಯಾಸಿ—ಅಟ್ಟತಾಳ.

ಗುರು ರಾಘವೇಂದ್ರರ ಚರಣ ಕಮಲವನ್ನು | ಸ್ಮರಿಸುವ ಸುಜನರಿಗೆ| ಕರಕರೆಗೊಳಿಸುವದು ದುರಿತರಾಶಿಗಳೆಲ್ಲ | ಕರಿಯು ಸಿಂಹನ ಕಂಡ ತೆರ ನೆಂತಾಹೋದಯ್ಯ ॥ ಪಲ್ಲ || ಗುರುಮಧ್ವಮತವೆಂಬೊ ವರಕ್ಷೀರ ಶರಧಿಲಿ | ಪರಮಶೋಭಿತ ಶಶಿಯಂತುದಿಸಿ | ಪರಮತ ತಿಮಿರಕ್ಕೆ | ತರಣಿ ಕಿರಣನಾಗಿ | ಧುರದಿ ಮೆರವ ಸಿರಿರಾಮ ನರ್ಚಕರಾದ || ೧ || ಹರಿಯೆ ಸರ್ವೋತ್ತುಮ ಸಿರಿಯೆ ಆತನರಾಣಿ | ಪರಮೇಷ್ಟಿ ಮರುತರೆ ಗುರುಗಳೆಂದು| ಗರುಡ ಶೇಷರುದ್ರ ಸಮರೆಂದು ಸ್ಥಾಪಿಸಿ| ಸ್ಥಿರ ತಾರತಮ್ಯ ಪಂಚಭೇದ ಸತ್ಯವೆಂಬ || ೨ || ರಾಯನ್ನೆ ರಾಶಿದೋಷಗಳ ದಹಿಸುವದು | ಘಾಯೆನ್ನೆ ಘನಜ್ಞಾನ ಭಕುತಿನಿತ್ತು | ವೇಯನ್ನೆ ವೇಗಾದಿ ಜನನ ಮರಣ ಗೆದ್ದು | ದ್ರಾಯನ್ನೆದ್ರವಿಣೋದ ಶ್ರುತಿಗೇವೆ ಘನಕಾಂಬ || ೩ || ಅಂಧಕರಿಗೆ ಅಕ್ಷಿವಂಧ್ಯರಿಗೆ ಸುತರು | ಬಂದ ಬಂದದವರ ಭೀಷ್ಟಗಳ ನಿತ್ತು | ಒಂದಾರು ನೂರು ವತ್ಸರ | ವೃಂದಾವನದಲ್ಲಿ ನಿಂದು ಮೆರವ ಕೃಪಾಶಿಂಧು ದೇವಾಂಶರ || ೪ || ವರತುಂಗಾತೀರ ಮಂತ್ರಾಲಯ ಪುರದಲ್ಲಿ | ಪರಿಪರಿ ಪೂಜಿ ಭೂಸುರರಿಂದ ಕೊಳುತ || ಶಿರಿಯರಮಣ ನಮ್ಮ ಗೋಪಾಲ ವಿಠಲನ್ನ | ಚರಣ ಸೇವಿಸುತಿಹ | ಗುರು ಶಿಖಾಮಣಿ ಯಾವ || ೫ ||

### ೧೪ ಸುಳಾದಿ (೧) —ರಾಗ—ಭೈರವಿ—ಧ್ರುವತಾಳ.

ಧರಿಯ ವಳಗೆ ನಮ್ಮ ಗುರು ರಾಘವೇಂದ್ರರಿನ್ನು | ಇರುತಿಪ್ಪ ವಿವರವ | ಅರಿದಷ್ಟು ವರಣಿಸುವೆ | ಸ್ಥಿರವಾಗಿ ಮಂತ್ರಾಲಯ ಪುರತುಂಗ ತೀರದಿ |

ಹರಿಭಕ್ತ ಪ್ರಲ್ಹಾದ ವರಯಾಗ ಇಲ್ಲಿವಾಡಿ । ಸುರರಿಗಮೃತ ಉಣಿಸಿ ಪರಿ ಪರಿಕ್ರೀಯಮಾಡಿ । ಪರಿಸಿದ್ಧನಾದನೆಂದು ಅರಿದು ಈಸ್ಥಳದಲ್ಲಿ । ಗುರು ರಾಘವೇಂದ್ರರಾಯ ಶರೀರವೋಗಾಡಿದಿಲ್ಲಿ । ಪರಲೋಕಕ್ಕೆ ಸಾಧನ ಪರಿ ಪೂರ್ತಿಯುಮಾಡಿಕೊಂಡು । ಸಿರಿಕೃಷ್ಣನ್ನ ಚರಣಕ್ಕೆರಗಿ ಸಂತೋಷದಲ್ಲಿ । ಧರಿಯಾವ್ಯಾಲಿದ್ದ ಜನರ ಪೊರೆಯಬೇಕೆಂದೆನುತ । ಹರಿನುಡಿದನು ಯಿವರ ಪರಮುದಯಾಳು ತಾನು । ಗುರುವಂತರ್ಯಾಮಿಯಾಗಿ ವರವಾ ನೀಯಲಿ ಜಗಕೆ । ನರಹರಿ ತಾನೆನಿಂದು ನಿತ್ಯಪೂಜೆಯು ಗೊಂಡು । ಸಿರಿ ವುಳ್ಳ ಕೀರುತಿಯು ಸುರರ ಪಾಲಕ ಚಕ್ರ । ಧರ ನಾರಾಯಣ ತಾನೆ ವರ ಸನ್ನಿಧಾನನಾಗೀ । ವರಿಗೆ ಫಲತಂದೀವ ಇಹಪರದಲ್ಲಿನ್ನು । ಕರುಣಾಕರ ರಂಗ ಗೋಪಾಲವಿಠಲ ತನ್ನ । ಶರಣರ ಪೊರೆವಂಥ ಚರಿಯು ಪರಿಪರಿ ಉಂಟೋ ॥ ೧ ॥

॥ **ಮಟ್ಟತಾಳ** ॥

ನರಹರಿ ಕೃಷ್ಣ ರಾಮ ಸಿರಿ ವೇದವ್ಯಾಸ । ಎರಡೆರಡು ನಾಲ್ಕು ಹರಿಯ ಮೂರ್ತಿಗಳು । ಪರಿವಾರ ಸಹವಾಗಿ ಸಿರಿಸಹಿತದಿ ನಿಂದು । ಸುರ ಗುರುವರ್ಯರು ಮಧ್ವಚಾರ್ಯರೆ ಮೊದಲಾಗಿ । ತರುವಾಯದಲಿನ್ನು ತರ ತಮ್ಯನುಸಾರ । ಪರಿಪರಿ ಯತಿಗಳು ಯಿರುತಿಪ್ಪರು ಯಿಲ್ಲಿ । ಹರುಷದಿಂ ದಲಿ ವೇದಗರೆದು ಶಾಸ್ತ್ರಗಳನ್ನು । ಪರಿಪರಿ ಪುರಾಣ ಭಾರತ ಗಾನದಲಿ । ಸರಿಸರಿ ಬಂದಂತೆ ಸರಿಗಮವೆನುತಲಿ । ಭರದಿಂದಲಿ ಕುಣಿದು ಭಕುತಿ ಯಿಂದಲಿನ್ನು । ಹರಿಯ ಪೂಜಿಸುತ್ತ ಹಗಲಿರಳು ಬಿಡದೆ । ಪರತತ್ವದ ವಿವರ ಪರಿಪರಿ ಪೇಳುವರು । ಗರುಡವಾಹನರಂಗ ಗೋಪಾಲ ವಿಠಲ । ಶರಣರ ಪಾಲಿಸುತ ಇರುತಿಪ್ಪನು ಯಿಲ್ಲಿ ॥ ೨ ॥

॥ **ತ್ರಿವಿಡಿತಾಳ** ॥

ನರಹರಿ ರೂಪನಾಗಿ ವಾಸವಾಗಿಯಿಲ್ಲಿ । ದುರಿತ ದುಷ್ಕೃತ ಬ್ರಹ್ಮೇತಿ ಗಳೋಡಿಸುವ । ಸಿರಿ ರಾಮನಾಗಿಲ್ಲಿ ಪರಿಪರಿಯಲಿ ದೇಶಾಂ । ತರ ಅನ್ನ

ಕಳಕೊಂಡು ನರರಿಲ್ಲಿ ಬಂವರೆ । ಸ್ಥಿರಪಟ್ಟ ಕಟ್ಟು ಸಿರಿಕೃಷ್ಣನಾಗಿಲ್ಲಿ । ಪರಿಪರಿಯಲಿ ಬಂದ ಪರಮಾತುರರಿಗೆ । ವರವೀವ ಪುತ್ರೋತ್ಸಹ ಮುಂಜಿ ಮದುವಿ । ಹರಕಿಗಳ ಕೈಕೊಂಡು ಹರುಷ ಬಡಿಸುವವರ । ಸಿರಿವೇದವ್ಯಾಸ ನಿಲ್ಲಿ ಭರದಿಂದಲಿ ಬಂದ । ದುರುವಾದಿಗಳನೆಲ್ಲ ಥುರದಿಂದ ಲೋಡಿಸಿ । ಮುರಿದು ಅವರಶಾಸ್ತ್ರ ಹರಿಸರ್ವೋತ್ತಮನೆಂದು । ಇರುವನಿಲ್ಲಿ ತೋರಿ ಶರಣ ಜನಕೆಯಿನ್ನು । ವರಜ್ಞಾನ ಸುಧಿಯನು ಕರದುಕೊಡುತಲಿಪ್ಪ । ಸಿರಿವಂದಿತ ಪಾದ ಗೋಪಾಲ ವಿಠಲ । ಪರಿಪರಿಯಲಿ ಇಲ್ಲಿ ವಾಲಗ ಕೈಕೊಂಬ ॥ ೩ ॥

॥ **ಅಟ್ಟತಾಳ** ॥

ರಾಘವೇಂದ್ರನೆಂಬೋ ರೂಪತಾನೆ ಆಗಿ । ರಾಘವೇಂದ್ರನೆಂಬೋ ನಾಮಯಿಡಿಸಿಕೊಂಡು । ರಾಘವೇಂದ್ರರಿನ್ನು ಮಾಡಿದಂಥ ಪುಣ್ಯ । ಭೋಗವರಿತು ತನ್ನ ಭಾಗವತರ ಕೀರ್ತಿ । ಸಾಗಿಸಿ ಸಲಹಲಿ ತ್ರಿಜಗದೊಳ ಗಿನ್ನು । ಮೇಘ ಸುರಿದಂತ ಮೋಘಕೀರುತಿಯನು । ರಾಘವಯಿವರಿಗೆ ರಾಜ್ಯದಿ ತಂದೀವ । ರಾಘವೇಂದ್ರ ಮೂರ್ತಿ ಗೋಪಾಲವಿಠಲ । ಭಾಗವತ ರಲ್ಲಿ ಬಹುಪೂಜೆಯನು ಗೊಂಬ ॥ ೪ ॥

॥ **ಆದಿತಾಳ** ॥

ದಿನದಿನಕಿಲ್ಲಿ ನೂತನ ಪೂಜೆಗಳಾಗ್ವವು । ದಿನದಿನಕಿಲ್ಲಿ ನೂತನ ವಾರ್ತೆಗಳಾಗ್ವವು । ದಿನದಿನಕಿಲ್ಲಿ ನೂತನೋತ್ಸವಗಳಾಗ್ವವು । ಜನರ ಸಂದಣಿ ಪ್ರತಿದಿನ ವಿಪ್ರಭೋಜನ । ಜನರಕೈಯಿಂದ ಪ್ರತಿಜನರೀಸು ತಿಂಬೋರು । ಜನುಮ ಸಫಲ ತಮ್ಮ ಜನನವ ನೀಗೋರು । ದಿನಸಪ್ತ ಶತ ತೇಜ ಜನನಾಥ ತಾನಿಲ್ಲಿ । ಅನುವಾಗಿ ತಾನಿಂದು ಘನಮಹಿಮೆಯಿಂದಲಿ । ಜನರ ಪಾಲಿಸುವದಕ್ಕನು ಮಾನಸಲ್ಲದೊ । ಗುಣಗಣ ಪರಿಪೂರ್ಣ ಗೋಪಾಲ ವಿಠಲ । ಅಣೊರಣಿ ಎಂಬುವಗೆ ಎಣೆಯಾರೊ ಜ ದೊಳಗೆ ॥೫

॥ ಜತೆ ॥ ಮಂತ್ರಸಿದ್ಧಿ ಕ್ಷೇತ್ರಯಿದು ನೋಡಿ ಕೋವಿದ । ಮಂತ್ರ ಪ್ರತಿಪಾದ್ಯ ಗೋಪಾಲ ವಿಠಲನಿಂದ ॥ ೬ ॥

## ೧೫ ಪದ—ರಾಗ—ಮೋಹನ—ತ್ರಿವಿಡಿತಾಳ.

ವಂದಿಸಿ ನೋಡುವ ಬಾರೆ । ಇಂದು ಮುಖಿಯಳೆ ರಾಘ । ವೇಂದ್ರರ ವೃಂದಾವನವನೂ ॥ ಒಂದೆಮಾಡಿದ ಸುಕೃತದಿಂದ ಹರಿ ಇವರಲ್ಲಿ । ನಿಂದು ತಾ ಪೂಜೆಯಗೊಂಬವ, ॥ ಪಲ್ಲ ॥ ಬಹು ಜನುಮಗಳಲ್ಲಿ ಅಹಿ ಶಾಯಿ ಇವರಿಂದ । ರಹಸ್ಯ ಅರ್ಚನೆಯ ಕೊಂಡು ॥ ಇಹಲೋಕದಲ್ಲಿ ಇವರ । ಮಹಿಮೆ ವ್ಯಕುತಿ ಮಾಡ । ಸಹಕಾರಿಗಳು ಸರ್ವರ । ಸಹಿತ ವಂದಂಶದಿ ಶ್ರೀಹರಿ ತಾನಿಲ್ಲಿ ನಿಂದು ಯಿಹ್ಯಪರ ಫಲಗಳನ್ನು । ಪಾಲಿಸಮೊಯೆಂದು ಬಂದು । ದೇಹಿಯಂದವರಿಗಿನ್ನು । ಮೋಹಿಸಿ ವರಗಳ ನೀಡುವ ॥ ೧ ॥ ನರ ಹರಿ ರೂಪ ತಾನಾಗಿ ಪರಿಪರಿಯಲಿ ಬಂದಂಥ । ದುರಿತ ಬ್ರಹ್ಮೇತಿಗಳು ದುಷ್ಟ । ಕರಕರೆ ರಾಕ್ಷಸ ಬ್ರಹ್ಮ । ಪಿರಿದು ಮಣಿವೊ ಅವನೆಲ್ಲಾ । ದೂರದಿ ಓಡಿಸುವ ಬಿಡದೆ । ಸಿರಿರಾಮ ರೂಪಾಗಿ ಅನ್ನಾ । ದೊರಿಯದೆ ಬಂದವರಿಗೆ। ಸ್ಥಿರವಾಗಿ ಪಟ್ಟವಗಟ್ಟುವ । ಪರಕಿಗಳು ಶುಭಾ ವುಚ್ಚವರ ಸಂಧಾನ ವೈಭೋಗವು ಸಿರಿಕೃಷ್ಣ ತಾನಾಗಿ ನೀಡುವ ॥ ೨ ॥ ವ್ಯಾಸರೂಪನಾಗಿ ಇಲ್ಲಿ ವಾಸವಾಗಿ ಬಂದ ಬಂದ । ದಾಸ ಜನರ ಅಜ್ಞಾನವ ಲೇಶವಿಡದೆ ವಕ್ರವೂ ॥ ದೋಷಗಳ ತರಿದು ಉಪದೇಶ ಮಾಡುವನು ಸುತತ್ವ । ಶೇಷ ಅಂಶ ಪ್ರಲ್ಹಾದ । ವ್ಯಾಸಮುನಿಯೆ ರಾಘವೇಂದ್ರ ಈಸುಬಗೆ ಪುಣ್ಯ ಇವರಿಗೆ । ಕೇಶವನೆ ತಾ ಮಾಡಿಸಿ ಈ ಸುಖಾ ಯಿಹ್ಯಪರದಲ್ಲಿ । ಶಾಶ್ವಿತ ವಾಗಿತ್ತು ಸಲಹುವ ॥ ೩ ॥ ಅನಿರುದ್ಧ ನಾಲ್ಕು ಮೂರ್ತಿ ಘನವಾಗಿ ತಾನಿದ್ದು ಪ್ರತಿ । ದಿನದಿನಕತಿ ಶಯವಾಗಿ । ದಿನಕರನಂತೆ ಸರ್ವತ್ರ । ಮನೆ ಮನೆಯಲ್ಲಿ ತಾವಿದ್ದು ಅನುವಾಗಿ ಪೂಜೆಯ ಗೊಂಬರು । ಕನಸು ಜಾಗ್ರದಿ ಬಂದು ಯಳ್ಳನಿತು ಪೂಜೆ ತಪ್ಪಿದರೆ । ದಣಿಸಿ ದಂಡೀಸಿ ಮಾಡಿಪ್ಪರು । ಜನರುಮಾಡಿದ ಸುಕೃತ । ಅನುಕೂಲವನು ಮೊದಗೀತು । ಮುನಿಯ ಪುಣ್ಯವನು ಯೇನೆಂಬೆ ॥ ೪ ॥ ಅವತೀರ್ಥದಲ್ಲಿ ಪೋಗಿ ಸೇವಿಸಿ ಬಂದದ ಕಿಂತ । ತಾವಧಿಕವಾಗಿ ಫಲವ । ಈಮಾನು ಶ್ರೀಹರಿ ಲಕುಮಿದೇವಿ ಸಹಿ ತವು ಯಿದ್ದು । ಕೋವಿದರಿಗಿನ್ನು ಬಿಡದೆ । ಪಾವನ ಮಂಗಳ ಕ್ಷೇತ್ರ

ಆವಾವ ವರ್ಣಿಪ ಮತ್ತೆ । ಭೂವನದೊಳಗೆ ಮಹಿಮೆಯ । ದೇವದೇವೇಶ ಕೃಷ್ಣ ಗೋ । ಪಾಲ ವಿಠಲನು ಇಲ್ಲಿ ಆವಾಗ ಸೇವಿಸಿ ಕೊಳುತಿಪ್ಪ ॥ ೫ ॥

## ೧೬ ಪದ—ರಾಗ—ಕಾಂಬೋದಿ—ಝಂಪಿತಾಳ.

ಗುರುರಾಜ ನಿಮ್ಮ ನಿಜ ಪರಮ ಅನುಗ್ರಹದಿ ಸಂ । ಚರಿಸುವ ಭಕತರಿಗೆ ॥ ದುರುಳ ಜನರಿಂದ ಮಾಡಲಿ ಪಟ್ಟ ದುಷ್ಟ ಕ್ರೀಯ ನೆರೆಸೊ ಕಾಲರಿಯುವವನ ನೋಡ ॥ ಪಲ್ಲ ॥ ಕ್ಷುದ್ರ ಮೃಗಗಳು ಬಹು ಶತ ಕೂಡಿ ಸಿಂಹ ಕು । ಪದ್ರವನು ಕೊಡಬಲ್ಲವೆ । ಅದ್ರಿಗಳು ಸುರಪತಿಯ ವಜ್ರಕ್ಕೆ ಮಲತಿನ್ನು । ಉಧ್ವಾಹತೆಯನು ಐದೊವೆ । ಕದ್ರು ವೆಯ ಸುತರೆಲ್ಲ ವಂದಾಗಿ ಖಗಪತಿ ಗು । ಪದ್ರವನು ಕೊಡಬಲ್ಲವೆ । ನಿದ್ರರಹಿತರಾದ ಶ್ರೀ ಹರಿಯ ದಾಸರಿಗೆ । ಭದ್ರ ವಲ್ಲದೆ ಬ್ಯಾರೆ ಛುದ್ರ ಮಾತುಂಟೆ ॥ ೧ ॥ ಆರು ಸ್ವಾತಂತ್ರವಿಲ್ಲೆಂದು ಶ್ರೀ ವಿಷ್ಣು ವ್ಯಾಪಾರ ಸರ್ವತ್ರ ಅರಿದು । ಕಾರಣ ಪುರುಷ ಸುಖ ದುಃಖ ಕೊಟ್ಟನೆಯೆಂದು ಭಾರ ನಿಮ್ಮಲ್ಲಿ ಇಟ್ಟು ॥ ಮೀರದೆ ಆಜ್ಞಾನುಸಾರ ನಡೆದ ವುಪಕಾರಿ ಸುಜನರಿಗೆ ಯೆನಿಸಿ । ಈ ರೀತಿಲಿಪ್ಪ ನಿಮ್ಮ ಕಾರುಣ್ಯ ಪಾತ್ರನಿಗೆ ಆರು ಸೈರಿಸಲಾರದೇನು ಮಾಡುವರು ॥ ೨ ॥ ಈಸು ಕಲಿಯುಲಿಯೆಂದು ಹರಿವ ಜಲಧಿಯೊಳು ಬಿಡೆ । ಆ ಶಿಶುವಿಗಾವ ಭಯವೋ ಪಾಷಾಣಾ ದಿಗಳ ಸ್ಥಿತಿಯನು ಮುನ್ನಿಸಿದ್ದರು ಪೋಷಣೆಗೆ ಅದರ ಚಿಂತೆ । ಪಾಶಾ ನಿಮ್ಮ ಕರುಣ ಆಧಾರ ವಿರಲು ಮುಣಿಗಿವಬಲ್ಲರೆ ಅನ್ಯರು । ದೋಷ ರಹಿತ ದೇವ ಗೋಪಾಲ ವಿಠಲನ್ನ । ದಾಸರ ಕರುಣ ಸಾಧಿಸಿ ತೋಷದ ಲಿಪ್ಪ ॥ ೩ ॥

## ೧೭ ಪದ—ರಾಗ—ಮುಖಾರಿ—ಏಕತಾಳ

ಮುನಿಯ ನೋಡಿರೋ ಮುಕುತಿ ಧನವ ಬೇಡಿರೋ । ಜನುಮ ರಹಿತರಾಗಿ ನಿಂದು ಘನವರವೀವ ರಾಘವೇಂದ್ರ ॥ ಪಲ್ಲ ॥ ಸಂತರ ಗೂಡಿ ಸಕಲ ಚಿಂತೆಯ ಬಿಡಿ । ಪಂಥವ ಸುಡಿ । ನೆಂತೆಂಬೋದು ಬಿಡಿ ॥

ಅಂತರಂಗದಿ ಅಲ್ಲಿ ಹರಿಯಾ । ಚಿಂತಿಸೇಕಚಿತ್ತದಲಿ ॥ ೧ ॥ ಗೋಳಕತ್ರಯು ಇನ್ನು ಕೇಳು ನಿರ್ಣಯಾ । ಆಲೋಚನಿಯ ಅಲ್ಲಿ ಶೀಲ ಮೂರ್ತಿಯಾ ॥ ಆಳು ಸಹಿತ ಇಪ್ಪನಲ್ಲಿ ಬಹಳ ಫಲವನೀವೂತಲಿ ॥೨॥ ಮುಂದ ಜನವನು ಪೊರಿಯೊ ವಂದು ರೂಪದಿ ಬಂದು ಹರಿಯು ತಾನಿಲ್ಲಿ ನಿಂದು ಒಂದುರೂಪದಿ । ಸುಂದರಾಂಗ ಗೋಪಾಲ ವಿಠಲ । ತಂದು ಫಲವ ನೀಪುತಿಪ್ಪ ॥ ೩ ॥

## ೧೮ ಪದ—ರಾಗ—ಪೂರ್ವೀ—ಆದಿತಾಳ

ರಥವಾ ನೇರಿದಾ ರಾಘವೆಂದ್ರಾ । ರಾಯ ಗುಣ ಸಾಂದ್ರ ॥ ಸತತ ಮಾರ್ಗದಿ ಸಂತತಸೇವಿಪರಿಗೆ। ಹಿತದಿಂದಲಿ ಮನೋರಥವ ಕೊಡುವನೆಂದು ॥ ಅ. ಪ ॥ ಚತುರ ದಿಕ್ಕು ವಿದಿಕ್ಕುಗಳಲ್ಲಿ । ಅರಿಪಾಜನರಲ್ಲಿ ಮಿತಿ ಇಲ್ಲದೆ ಬಂದು ವಾಲ್ಗೈಸುತಲೀ । ವರವಾ ಬೇಡುತಲೀ । ಸ್ತುತಿಸುತ ಪರಿ ಪರಿ ತನರಾಗಿಹರಿಗೆ। ಗತಿಯೆ ಕೊಡದಲೆ ಸರ್ವಥ ಬಿಡೆನೆಂದು ॥ ೧ ॥ ಅತುಳ ಮಹಿಮನು ಆದಿನದಲ್ಲಿ। ದಿತಿಜಾ ವಂಶದಲಿ । ಉತುಪತಿ ಯಾಗಿ ಉಚಿತಾ ದಲ್ಲಿ। ಉತ್ತಮ ಮತಿಯಲ್ಲಿ । ಅತಿಶಯ ವಿರುತಿರೆ। ಪಿತನ ಬಾಧೆಗೆ ಮನ್ಮಥ ಪಿತನೊಲಿಸಿದೆ ಜಿತ ಕರುಣದಲಿ ॥ ೨ ॥ ಪ್ರಥಮ ಪ್ರಲ್ಹಾದಾ ವ್ಯಾಸ ಮುನಿಯೆ ಯತಿ ರಾಘವೇಂದ್ರಾ । ಪತೀತಾರುದ್ಧರಿಪ ಪಾವನ ಕಾರಿ । (ಕರಿಯೆ)ಕೈ ಮುಗುವೆನೋ ಧೊರೆಯೆ । ಕ್ಷಿತಿಯೊಳು ಗೋಪಾಲ ವಿಠಲನ ನೆನೆಯುತ । ಕ್ಷಿತಿ ಮಂತ್ರಾಲಯದೊಳು ಶುಭವೀಯುತಲಿ [ವರ ಮಂತ್ರಾ ಲಯದೊಳು ಶೋಭಿಸುತಾ ] ॥ ೩ ॥

## ೧೯ ಪದ—ರಾಗ—ಕಾಂಬೋದಿ—ತ್ರಿವಿಡಿತಾಳ

ಕಷ್ಟ ಸಂಸಾರೆಂಬ । ಅಟ್ಟುಳಿಗೆ ನಾ ಆರೆ ಕೃಷ್ಣೋಪಾಸಕ ರಾಘವೇಂದ್ರ ॥ ಪ ॥ ವರ್ಣಿಸಲು ಕುಳಿತರೆ ವಶವಲ್ಲ ಯಿದಕಂತ್ಯೆ । ವನ್ನು ಕಂಡಿವರ ಈಗ ಕಾಣೆ । ಎನ್ನಂತೆ ಬಳಲುವರು ಯಿಲ್ಲ ಯೋಚಿಸಿ ನಿನ್ನ ತೋರುವರು ಆರಿಲ್ಲ । ದಣಿದು । ಹಣ್ಣು ಹಣ್ಣಾದೆ ನಾಯೆಲ್ಲಾ । ಅಯ್ಯಾ । ನಿನ್ನ ಹೊರತಾಗಿನ್ನು । ಎನ್ನ ದಾಟಿಸುವವರ । ಇನ್ನು ನಾಕಾಣೆ ತಂದೆ

ಮುಂದೆ ॥ ೧ ॥ ಮೂರು ಗುಣ ಪ್ರಾವಾಹ ಸುಳಿಯೊಳಗೆ ಬಿದ್ದ ನಾ । ಯೇರಲಿ ದಡವ ಕಾಣೆನಯ್ಯಾ । ಆರರಿಗಳೆಂಬಹಿಯ ಕಾಟ । ಕೇಳು । ನಾರಿ ಸಂತರ ಕೂಟಾ । ಶಿಲ್ಕಿ । ಪಾರಗಾಣೆವುಪಾಯದಾಟ ಚೆಲ್ವ । ನಾರಾಯಣನ ಮುಖ್ಯ । ಕಾರುಣ್ಯಕೆ ಪಾತ್ರ । ಸಾರಿದೆನು ನಿನಗೆ ವೇಗ ಈಗ ॥ ೨ ॥ ಒಮ್ಮೆ ಮುಣಗುವೆನಯ್ಯಾ । ವೊಮ್ಮೆತಳ ಕೆಳನಾಹೆ । ವೊಂಮೆ ತಲೆ ಎತ್ತುವೆನು ನಲಿವೆ। ಅಮ್ಮೊಮ್ಮೆ ಎನ್ನ ಆಯುಸವ ತರಿದು । ನಿಮ್ಮ ಚರಣುಗಳು ಸೇವಿಸುವ । ಲಾಭ । ಸುಮ್ಮತಿಯುನಿತ್ತು ಸಂತೋಷ ವಾಚಲ್ವ ರಮ್ಮೆಅರಸಾ ನಮ್ಮ ಗೋಪಾಲವಿಠಲಪರ ಬೊಮ್ಮನಅರ್ಚಿಸುವ। ಸುಮ್ಮನಸ ಕಾಂಸಾ ॥ ೩ ॥

## ಶ್ರೀ ಗುರುಗೋಪಾಲವಿಠಲ.

### ೨೦ ಪದ—ರಾಗ—ಬ್ಯಾಗಡಿ—ಅಟ್ಟತಾಳ.

ಕರುಣಿ ಕಾಯೋ ರಾಘವೇಂದ್ರ ಗುರುವೆ । ನೆರೆನಂಬಿದವರ ಕಾಮಿತ ಕಲ್ಪ ತರುವೆ ॥ಪಲ್ಲ॥ ತೀರ್ಥ ವಾದನ ಪಾದ ಪಂಕಜ ಭೃಂಗಾ । ಧೂರ್ತ ವಾದೀ ಅಂಧತಿಮಿರ ಪತಂಗ । ಕಾರ್ತ ಸ್ವರಲೋಷ್ಟ ಸಮಚಿತ್ತ ಪಾಂಗಾ । ಆರ್ತ ಜನರ ಪಾಲಾ ಅತಿದಯ ಪಾಂಗಾ ॥ ೧ ॥ ಚಪಲ ಚಿತ್ತರು ತಮ್ಮ ಜಪತಪದಿಂದು । ವಿಪರೀತ ಕರ್ಮ ಪೋಗುವವುಹೀಗೆಂದು । ಅಪಹಾಸ ಅಲ್ಲವೆ ಅದು ಯೇನೋ ಛಂದು । ಕೃಪಣ ವತ್ಸಲ ಕಾಯೊ ಅತಿದಯದಿಂದ ॥ ೨ ॥ ಫಲಬೇಡಿ ಸೇವೆ ಮಾಡುವ ದಾಸನಲ್ಲಾ । ಫಲಕೆ ಸೇವಿಯು ಯಿಚ್ಛೈಸುವ ಸ್ವಾಮಿ ಅಲ್ಲಾ । ಹಲವು ಮಾತೇನು ಈ ವಿವರವನೆಲ್ಲಾ । ತಿಳಿದ ಸರ್ವಜ್ಞರಿಗೆ ಬಿನ್ನೈಸೊ ಸೊಲ್ಲಾ ॥ ೩ ॥ ಸೊತ್ತುಮಾ [ರ] ಅನಿಷ್ಟ ಪುಣ್ಯವೆ ಬಂದು । ಭೃತ್ಯರ ಸುಖಕೆ ಕಾರಣ ವಾಹವೆಂದು । ಕ್ಲಿಪ್ತವಾಗಿದೆ ನಮಗೆ ವಲಿದಾನೆ ಇಂದು । ಇತ್ತು ಪಾಲಿಸ ಬೇಕೊ ದೀನಜನಬಂಧು ॥೪॥ ಮರುದಂಶ ಮಧ್ವಮತಾಬ್ಧಿ ಚಂದಿರನೆ। ಪರಮ ಕಲ್ಯಾಣ ಸದ್ಗುಣ ರತ್ನಾಕರನೆ । ಈದುರಿತ (ನಿನಾಘಕ್ಕೆ) ಜೀಮೂತಕೆ ಚಂಡಮಾರುತನೆ । ಗುರು ಗೋಪಾಲ ವಿಠಲನ ಶರಣನೆ ॥ ೫ ॥

## ೨೧ ಪದ—ರಾಗ—ನೀಲಾಂಬರಿ—ತ್ರಿವಿಡಿತಾಳ.

ಶರಣು ಶರಣು ರಾಘವೇಂದ್ರ ಗುರುರಾಯಾ । ಶರಣು ಶರಣು ಕವಿ ಗೇಯ । ಶರಣು ಮಾರುತ ಮತ ಶರಧಿ । ಅತ್ರಿತನಯಾ । ಧರಣಿ ವಿಬುಧ ಜನಪ್ರೀಯಾ ॥ ಪಲ್ಲ ॥ ಅನಾದಿ ಕಾಲದಿ ಎನಗೆ ಶ್ರೀಹರಿ ತಾನು । ನಾನಾ ದೇಹ ದೇಶ ಕಾಲದಲಿ ತಾನೆ ಯಿಚ್ಛೈಸಿ ಮಾಡಿದ ಮರಿಯಾದಿಯು ನಾನ ರಿತವನಲ್ಲ ಗುರುವೆ । ನೀನದು ಬಲ್ಲ ಕೋವಿದನೆಂದು ಮನಗಂಡು । ದೀನ ನಾಗಿ ಮೊರೆಯಿಡುವೆ । ಏನೇನು ವಿಘ್ನಗಳುಂಟು ಪರಿಹರಿಸಿ ನೀನೆಪಾಲಿಸ ಬೇಕು ಕರುಣಿ ॥ ೧ ॥ ಹಸ್ತಿಮಜ್ಜನದಂತೆ ಕರ್ಮಾದಿ ಕರ್ಮನಿರಸ್ತ ವಾದುದು ಅಬಲರಿಗೆ । ಗ್ರಸ್ತವಾಗಿದೆ ಮನ ವಿಷಯದಿ ಮೊದಲಿಂದು ದುಸ್ತರವವನಿಗೆ ಗೆಲಲೊಶವೆ । ವಿಸ್ತಾರಮಹಿಮ ನೀನೊಲಿದು ಕರುಣಿಸಲು। ದುಸ್ತರ ವೆಲ್ಲ ಸುಲಭವೋ । ಹಸ್ತಿವರದನಂಘ್ರಿಯಲ್ಲಿ ಭಕ್ತಿಯ ಕೊಟ್ಟು ಸ್ವಸ್ಥಚಿತ್ತನ ಮಾಡೊಕರ.ಣಿ ॥ ೨ ॥ ಗುರುವೆ ಕಾಮಿತ ಕಲ್ಪತರುವೆ ತ್ರಿಕಾಲಜ್ಞ । ವರಯೋಗಿ ಅನಘನಿಃಸ್ಸಂಗಾ । ದುರಿತ ಅಕಾಲ ಮೃತ್ಯುವಿನ ಗಂಟಲಗಾಣ । ಪರಮಹಂಸರ ಕುಲ ತಿಲಕಾ । ಮರುತಾಂತರ್ಗತ ಗುರು ಗೋಪಾಲ ವಿಠಲನ್ನ । ಸರುವಸ್ಥಾನದಿ ಸಮದರ್ಶಿ । ಕರವ ಮುಗಿದು ಬಿನ್ನೈ ಸುವೆನೊ ಲಾಲಿಸಿ ವೇಗಾ ಪೊರವ ಭಾರ ನಿನ್ನದೊ ಕರುಣಿ ॥ ೩ ॥

## ೨೨ ಪದ—ರಾಗ—ಭೈರವಿ—ಆದಿತಾಳ.

ಮುನಿಗಳ ನೋಡಿರೊ ಬಕುತಿ ಜ್ಞಾನ ಧನವ ಬೇಡಿರೊ । ಅನಲ ದೇವನ ಮತ ವನರಾಶಿಗೆ ಶುಭಚಂದ್ರಾ ಗುರು ರಾಘವೇಂದ್ರಾ ॥ ಪಲ್ಲ ॥ ಮನದಲನವರತ । ನೆನೆವ ಸುಜನರಿಗೆ ವೊಲಿದು । ಮುದದಲಿ ನಲಿದು । ಘನಮಣಿ ಕನಕ ಭೂಷಣಗಣ ಆಯುರಾರೋಗ್ಯ ಸಕಲ ಸೌಭಾಗ್ಯಾ । ವನುತೆ ತನುಜ ಧನಮನೆ ಅಂದಣ ಸುಜ್ಞಾನಾ ಹರಿ ಭಕುತಿ ನಾನಾ । ಮನೋರಥನೆನದಾಕ್ಷಣವಿತ್ತು ಪಾಲಿಪಯೋಗಿ ಪರಃಮವೈರಾಗಿ ॥ ೧ ॥ ಜನಕ ಜಾಮಾತನ ಗುಣಕ್ರೀಯ ರೂಪಗಳೆಲ್ಲಾ । ಧೇನಿಸಬಲ್ಲ । ಜನಕಾದಿ

ಗಳಂದದಿ ನಿಃಸಂಗದಿಮೌನಿ | ಅಪರೋಕ್ಷಜ್ಞಾನಿ | ಜನಕಸುತರ ಪೊರವಂದದಿ ಭಕ್ತರ ಪೊರೆವ ಜಗದೊಳು ಮೆರೆವ | ಜನನ ರಹಿತ ಜಗಜ್ಜನನಾದಿ ಕಾರಣ ಹರಿಯ ವೊಲಿಸಿದ ಸಿರಿಯಾ || ೨ || ಭೂತಪ್ರೇತ ದ್ವಿಜಗ್ರಹ ಪೈಶಾಚ ಬೇತಾಳ | ಉಗ್ರಗ್ರಹಗಳ | ಭೀತಿಯಿಂದಲಿ ಅನ್ಯತ್ರ ತರ ಕಾಣದೆ ಬಂದಾ ಜನರ ದಯದಿಂದ | ತಾತವಕದಿ ಪಾದ ತೋಯದಿಂದೋಡಿಸಿ ಭಯವನು ಬಿಡಿಸಿ | ಶ್ವೇತ ಕುಷ್ಟ ಪಿತ್ತ ಸೀತ ವಾತ ರೋಗಗಳ ಕಳವ ಕೀರ್ತಿಲಿ ಪೊಳಿವಾ || ೩ || ಗುರುಸುಧೀಂದ್ರರ ಕರ ಸರಸಿರುಹ ಜಾತಾ ಕೇವಲ ಪ್ರಖ್ಯಾತಾ | ಧರಿಯೊಳು ಜಯಮುನಿ ವರದ ಶಾಸ್ತ್ರದ ಭಾವವ ಮಥಿಸಿ ಗ್ರಂಥವ ರಚಿಸಿ | ಪರಮಶಿಷ್ಯರಿ ಗುಪದೇಶವನುಮಾಡಿ ಸಂಶಯ ಈಡ್ಯಾಡಿ | ನರಹರಿ ಸರ್ವೋತ್ತುಮನೆಂದು ಮೆರೆವ ಭಕುತರ ಪೊರೆವ ||೪|| ಸಿರಿವರ ಗುರುಗೋಪಾಲ ವಿಠಲನ್ನ ಶರಣಾ ಮುನಿ ಶಿರೋಭರಣಾ | ಮೊರೆ ಹೊಕ್ಕ ಜನರ ದುರಿತಗಜಕೆ ಭೇರುಂಡಾ ವರಯುತಿ ಶೌಂಡ || ಪರಮತ ದುರುಳ ಕುವಾದಿ ಸಂಘ ಜೀಮೂತಾ ಝುಂಝಾವಾತಾ | ನೆರೆ ನಂಬಿದವರಿಗೆ ಸುರತರು ಚಿಂತಾಮಣಿಯೊ | ಶುಭೋದಯ ಖಣಿಯೋ || ೫ ||

## ೨೩ ಪದ—ರಾಗ—ಕಾಂಬೋಧಿ—ಝಂಪಿತಾಳ.

ನಾಮದಾ ಘನತೆ ನಿಮಗ ಸಲ್ಲೋದೆ | ಶ್ರೀಮಂತ ರಾಘವೇಂದ್ರ ಸ್ವಾಮಿ ಎಂತೆಂಬ || ಪಲ್ಲ || ಅಲವ ಬೋಧರ ಭಾಷ್ಯಾಂಬುಧಿಗೆ ಟೀಕೆಗಳೆಂಬ | ಲಲಿತಸೇತುವೆಗಟ್ಟಿ ಹರಿದಾಸರ || ಸುಲಭದಿಂದೈದಿಸಿ ದಶಕರಣಗಳ ಜೈಸಿ | ವಲಿಸಿ ಸವಿದೆ ವಿಷ್ಣುಜ್ಞಾನ ಪೃಕೃತಿಯನು || ೧ || ಹಲವು ದುರ್ಮತವಾದಿಗಳೆಂಬಾದ್ರಿಗಳಕು | ಲಿಶದಿಂದ | ವರಪಕ್ಷ ಭೇದಿಸಿ | ಅಲವಬೋಧರ ಮತ ಅಮರಾವತಿಯಲಿ ನಿ | ಶ್ಚಲ ಸಾಮ್ರಾಜ್ಯವನಾಳ್ದೆ | ಕವಿಗಳ ಪೊರದೆ || ೨ || ಭಾಸುರಸಚ್ಛಾಸ್ತ್ರ ವದನದಿ ವೊಪ್ಪಿತಾ | ಪೂಶರ ಜಯ ಶಕ್ತಿಯನೆ ಧರಿಸಿದೆ | ವಾಸವಿ ಸಖ ಗುರುಗೋಪಾಲ ವಿಠಲನ ದಾಸ | ಶ್ರೀಸುಧೀಂದ್ರ ಕುಮಾರ ಸ್ವಾಮಿ ರಾಘವೇಂದ್ರ || ೩ ||

## ಶ್ರೀ ವರದಗೋಪಾಲವಿಠಲ

### ೨೪ ಪದ—ರಾಗ—ಸೌರಾಷ್ಟ್ರ—ಆದಿತಾಳ.

ಚಂದ್ರಾ ಗುಣಸಾಂದ್ರಾ | ರಾಘವೇಂದ್ರ ಗುರುವೆ ಸದ್ವೈಷ್ಣವ ಕುಮುದಕೆ ಚಂದ್ರಾ || ಪಲ್ಲ || ಶ್ರೀರಘುರಾಮ ಪದಾಂಬುಜ ಭೃಂಗಾ| ಮಾರುತ ಮತ ಶುಭವಾರಿ ನಿಧಿಗೆ ಪೂರ್ಣ || ೧ || ಶ್ರೀಕರ ಹರಿಯ ನಿರಾಕರಿಸುವ ದುಷ್ಟ | ಭೀಕರ ಮಾಯ್ಗಳ ಮುಖ ಕಮಲಗಳಿಗೆ || ೨ || ವರದ ಗೋಪಾಲ ವಿಠಲನ ಮಾರುತಿಗೆ | ಹರುಷ ಬಡುವ ಹರಿಭಕುತ ಚಕೋರಕೆ ಚಂದ್ರ || ೩ ||

## ಶ್ರೀ ಪ್ರಸನ್ವೆಂಕಟರು.

### ೨೫ ಪದ—ಉದಯರಾಗ—ಝಂಪಿತಾಳ.

ಏಳು ಶ್ರೀ ಗುರುರಾಯ ಬೆಳಗಾದಿತಿಂದು | ಧೂಳಿದರುಶನ ಕೊಡಿರಿ ಈವೇಳೆ ಶಿಷ್ಯರಿಗೆ || ಪಲ್ಲ || ಏಳು ಗುರು ರಾಘವೇಂದ್ರ ಏಳು ದಯಾ ಗುಣ ಸಾಂದ್ರ | ಏಳು ಕುಮುದಕೆ ಚಂದ್ರ ಶ್ರೀರಾಘವೇಂದ್ರ || ಅ. ಪ || ಅಶನವಸನಗಳಿಲ್ಲವೆಂಬ ವ್ಯಸನಗಳಿಲ್ಲ | ಮುಸುಕ್ಹಾಕಿ ಮೋಸದಲಿ ಮೋಹಿಸೆದೆನೆಲ್ಲ | ಅಸುರಾರಿಯ ಸ್ಮರಿಸದೆ ಪಶುವಿನೊಲು ಈ ದೇಹ | ವಸುಮತಿಯು ಏಳು ಬಹಳ್ಹ ಸಗೆಟ್ಟಿತಲ್ಲ || ೧ || ನಾನು ನನ್ನದು ಎಂದು ಹೀನಮನಸಿಗೆ ತಂದು | ಏನು ಮಾಡುವ ಕರ್ಮ ನಾನೆ ಅಹುದೆಂದು ಸ್ವಾಮಿ ಕರ್ತೃತ್ವನು ತಿಳಿಯಲಿಲ್ಲ | ನಾನೊಂದು| ನೀನೆಉದ್ಧರಿಸಯ್ಯ ದೀನ ದಯಾಸಿಂಧೂ || ೨ || ಅನ್ಯ್ಯರ ಕೈಯಲ್ಲಿ ನಿನ್ನವರಸಿಲಿಸುವದು | ಅನ್ಯಾಯವಾಯ್ತು ಪಾವನ್ನ ಗುರುರಾಯ | ಎನ್ನವಾತಲ್ಲವಿದು ನಿನ್ನಮಾತೆ ಸರಿ| ಮನ್ನಿಸಿ ಆಗು ಪ್ರಸನ್ನ ಗುರುರಾಯಾ || ೩ || ವೇದ ಶಾಸ್ತ್ರಗಳನ್ನು ಓದಿ ಪೇಳ್ದವನಲ್ಲ | ಭೇದಾ ಭೇದವನು ತಿಳಿಯಲಿಲ್ಲ | ಸಾಧು ಸಜ್ಜನರ ಸಹ ವಾಸ ಮೊದಲಿಲ್ಲಾ | ಹೀಗಾಗಿ ಮಾನ ಮಾರಿಸಿದಿ ಉಳಿಸಲಿಲ್ಲ || ೪ || ಆಶಗೊಳಗಾದೇನೊ ಹೇಸಿ ಮನುಜನು ನಾನು | ಕ್ಲೇಶ ಭವಸಾಗರದೊಳೀಸು ತಿಹ್ಯನೋ | ಏಸು ಜನ್ಮದಿ ಎನ್ನಗಾಸೆ ಮಾಡಿದಿ ಮುನ್ನ | ದಾಸನಾಗುವೆ ತೋರಿಸೊ ಪ್ರಸನ್ನ ವೆಂಕಟನ || ೫ ||

## ಶ್ರೀ ಜಗನ್ನಾಥವಿಠಲ

### ೨೬ ಪದ—ರಾಗ—ಮಾರವಿ—ತ್ರಿವಿಡಿತಾಳ.

ಕರುಣೀಗಳೊಳಗೆಣೆ ನಾ ನಿನಗೆ ಸ | ದ್ಗುರುವರ ರಾಘವೇಂದ್ರ | ಚರಣ ಕಮಲಯುಗ | ಮೊರೆ ಹೊಕ್ಕವರ ಮನ | ಧರಕೀಯನಿರುತ ಯೊವೆ | ನೀಕಾವೆ | || ಪಲ್ಲ || ರಾಘವೇಂದ್ರ ಗುರು ನೀಗತಿ ಎಂದನು | ರಾಗಾದಿ ಭಜಿಸುತಿಪ್ಪ | ಭಾಗವತರ ದುರಿತೌಘಗಳಳಿದು ಚ | ನ್ನಾಗಿ ಸಂತೈಸುವೆನೀ | ಸನ್ಮೌನಿ || ೧ || ಸುಧೀಯಿಂದ್ರ ಯತಿಕರ | ಪದುಮ ಸಂಭವಮಧು | ವಥ ಪಾದಾಂಬುಜ ಮಧುಪಾ | ತ್ರಿದಶ ಭೂರುಹದಂತೆ | ಬುಧ ಜನರೀಪ್ಸಿತ | ವೊದಗಿ ಪಾಲಿಸಿ ಪೊರವೆ | ಮದ್ಗುರುವೆ || ೨ || ಕುಧರದೇವನ ದಿವ್ಯ ರದನದಿ ಜನಿಸಿದ | ನದಿಯತೀರದಿ ಶೋಭಿಪಾ || ಸದಮಲ ಘನ ಮಂತ್ರ| ಸದನ ನಿಲಯ ಜಿತ| ಮದನ ಶ್ರೀ ಜಗನ್ನಾಥಾ | ವಿಠಲದೂತ || ೩ ||

### ೨೭ ಪದ—ರಾಗ—ಕಾಂಬೋದಿ—ಆದಿತಾಳ.

ಶ್ರೀರಾಘವೇಂದ್ರ ನಿನ್ನ | ಚಾರು ಚರಣವ | ಸಾರಿದೆ ಶರಣ ಮಂ | ದಾರ ಕರುಣವ ಬೀರು ಭಯ ವನಧಿ | ತಾರಿಸು ತವಕದಿ | ಸೂರಿ ಸುಧೀಂದ್ರ ಕುಮಾರ ಉದಾರಾ || ಪಲ್ಲ || ಮುನಿರಾಯಾ ನಿನ್ನಪಾದ | ವನರೂಹ ಧ್ಯಾನ | ಪ್ರಣವನಸ್ತವನ ಅ | ರ್ಚನೆ ಮಾಳ್ಪ ನಾನಾ | ಜನರ ವಾಂಛಿತ ವೀವ ಗುಣಪೂರ್ಣ ಜ್ಞಾನ | ಧನವೆ ಪಾಲಿಸೆನಗೀ | ಕ್ಷಣನಿನ್ನಾಧೀನಾ | ಮನುಜನ ಪ್ರತಿದಿನ | ದಿನದಿ ದಣಿಸುವದು | ಘನವೆ ಗುರುವೆ ಪಾವನಕರ ಚರಿತಾ || ೧ || ಮೂಲರಾಮರ ಪಾದಾಕೀ | ಲಾಲಜ ಮಧುಪಾ | ಬಾಲಕನ ಬಿನ್ನಪವ | ಲಾಲಿಸೊ ಮುನಿಪಾ | ತಾಳಲಾರೆನೊ ತಾಪ | ತ್ರಯದ ಸಂತಾಪಾ | ಕೀಳು ವಿಮಲ ಜ್ಞಾನ ಶೀಲ ಸ್ವರೂಪ | ಭೂಲಲನಾಥನ ಕೋಲ ನಂದನಾ | ಕೂಲಗ ವರ ಮಂತ್ರಾಲಯ ನಿಲಯ || ೨ || ಕಲಿ ಕಲ್ಮಷವಿದೂರ | ಕುಜನ ಕುಠಾರಾ ನಳಿನಾಕ್ಷ ವಿಮಲಶ್ರೀ | ತುಲಸಿ ಯಾ ಹಾರಾ | ಗಳಸು ಶೋಭಿತ ಕಮಂಡಲ ದಂಡಧಾರಾ | ಅಲವ ಬೋಧರಮತ | ಜಲಧಿ ವಿಹಾರ || ಸುಲಿಲಿತ ಕರುಣಾಂಬುಧಿಯೆ ಜಗನ್ನಾಥವಿ | ಠಲ ನೊಲಿಮಿಯ ಪಡದಿಳಿಯೊಳು ಮೆರೆದಾ || ೩ ||

## ಶ್ರೀ ಜಗನ್ನಾಥವಿಠಲ.

### ೨೮ ಪದ—ರಾಗ—ಪೂರ್ವಿ—ಆದಿತಾಳ

ಶ್ರೀರಾಘವೇಂದ್ರಾರ್ಯ ಬಾರೊ । ಕಾರುಣ್ಯ ವಾರಿಧಿಯೆ ಬಾರೋ। ಆರಾಧಿಪ ಭಕ್ತ ಕಿಷ್ಟಾ । ಪೂರೈಸುವ ಪ್ರಭುವೆ ಬಾರೊ ॥ ಪಲ್ಲ ॥ ರಾಜಾ ವಂಶೋದ್ಭವ ಪಾದಾ । ರಾಜೀವ ಭೃಂಗನೆ ಬಾರೊ । ರಾಜಾಧಿ ರಾಜಾ ರೊಳು ವೀ । ರಾಜೀಸುವ ಚಲುವ ಬಾರೊ ॥ ೧ ॥ ವ್ಯಾಸರಾಯ ರೆನಿಸಿ ನೃಪನಾ । ಕ್ಲೇಶವ ಕಳೆದವನೆ ಬಾರೊ । ಶ್ರೀಸುಧೀಂದ್ರ ಕರಾಂಬುಜ ವಾಸುವೇವಾರ್ಪಿತಧೀ ಬಾರೊ ॥ ೨ ॥ ಸನ್ನ್ಯಾಸಾ ಕುಲದೀಪ ಬಾರೊ ಸನ್ನುತ ಸದ್ಗುಣನೆ ಬಾರೊ। ಮಾನ್ಯ ಜಗನ್ನಾಥಾ ವಿಠಲಾ । ಪನ್ನಜನರ ಪ್ರೀಯಾ ಬಾರೊ ॥ ೩ ॥

### ೨೯ ಪದ—ರಾಗ—ಪೂರ್ವಿ—ಆದಿತಾಳ.

ರಾಯ ಬಾರೊ ತಂದೆ ತಾಯಿ ಬಾರೊ । ನಮ್ಮ ಕಾಯಬಾರೊ ಮಾಯಿಗಳ ಮರ್ದಿಸಿದ ರಾಘವೇಂದ್ರ। ರಾಯಬಾರೊ ॥ಪ॥ ಭಾಸುರಚರಿತನೆ। ಭೂಸುರ ವಂದ್ಯನೆ । ಶ್ರೀಸುಧೀಂದ್ರಾರ್ಯರ ವರಪುತ್ರ । ರಾಯಬಾರೊ। ಶ್ರೀಸುಧೀಂ ದ್ರಾರ್ಯರ ವರಪುತ್ರರೆನಿಸಿದ । ದೇಸಿಕವರಿಯನೆ ರಾಘವೇಂದ್ರರಾಯ ಬಾರೊ ॥ ೧ ॥ ವಂದಿಪ ಜನರಿಗೆ । ಮಂದಾರ ತರುವಂತೆ । ಕುಂದಾದ ಭಿಷ್ಟಿಯಾ ಸಲಿಸುತಿಪ್ಪ ರಾಯಬಾರೊ। ಕುಂದಾದ ಭಿಷ್ಟಿ[ಸ]ಯೊಲಿಸುತಿಪ್ಪ ಸುರಮುನಿ । ಮಂದನಾಮತಿಗೆ ರಾಘವೇಂದ್ರಾ ರಾಯ ಬಾರೊ ॥ ೨ ॥ ಆರುಮೂರೇಳು ನಾಲ್ಕೆಂಟು ಗ್ರಂಥ ಸಾರಾರ್ಥ । ತೋರಿಸಿದೆ ನ್ಯಾಯದಿಂದ ಸರ್ವರಿಗೆ ರಾಯ ಬಾರೊ । ತೋರಿಸಿದೆ ನ್ಯಾಯದಿಂದ ಸರ್ವರಿಗೆ ಸರ್ವಜ್ಞ । ಸೂರಿಗಳರಸನೆ ರಾಘವೇಂದ್ರಾ ರಾಯ ಬಾರೊ ॥ ೩ ॥ ರಾಮಪಾದಾಂಬುಜ ಸರಸ ಭೃಂಗಾ । ಭಕ್ತಕೃಪಾಂಗಾ । ಭ್ಯಾಮುಕ ಜನ ಸನ್ಮಾನಭಂಗಾ । ರಾಯ ಬಾರೊ । ಭ್ಯಾಮುಕ ಜನಸನ್ಮಾನ ಭಂಗ ಮಾಡೀದಾ ಧೀಮಂತರೊಡಿಯನೆ ರಾಘವೇಂದ್ರಾ ರಾಯ ಬಾರೊ ॥ ೪ ॥ ಭೂತಳಾಧಿಪನಾಭೀತಿಯ ಬಿಡಿಸಿದೆ । ಪ್ರೇತತ್ವ ಕಳದೆ ಮಹಿಷಿಯಾ । ರಾಯಬಾರೊ । ಪ್ರೇತತ್ವ ಕಳೆದೆ ಮಹಿಷಿಯಾ ಶ್ರೀಜಗನ್ನಾಥಾ ವಿಠಲನಾ ಪ್ರೀತಿ ಪಾತ್ರಾ ॥ ೫ ॥

## ೩೦ ಪದ—ರಾಗ—ಅಹರಿ—ಏಕತಾಳ.

ನಿನ್ನ ನಂಬಿದೆ ರಾಘವೇಂದ್ರ । ನೀ । ಎನ್ನಾ ಪಾಲಿಸೊ ಸಯಂ ಮೀಂದ್ರ । ಸನ್ನುತ ಸರಸ ಕವೀಂದ್ರ ।ಪ್ರ। ಪನ್ನ ಹೃತ್ಕುಮುದ ನಚ್ಚಂದ್ರಾ ॥ ಪಲ್ಲ ॥ ಭೇದ ಮತಾಬ್ಧಿ ವಿಹಾರಾ । ಕುವಾದಿ ಮದವನ ಕುಠಾರಾ ॥ ನಾಧಿತ ಖಿಳ ತತ್ವ ಸಾರಾ । ಮಧುಸೂದನ ಚಂದ್ರಚಕೋರಾ ॥ ೧ ॥ ಭಾರತೀಶ ಪದಾಬ್ಜ ಭೃಂಗ ಖ । ರಾರೀಯ ಕರುಣಾಂತರಂಗಾ । ನಾರಿದ ವರ ಭಯಭಂಗಾ ಸ । ಮೀರ ಮತಾಂಬುಜ ಪತಂಗಾ ॥ ೨ ॥ ಸುಧಿ ಯಿಂದ್ರ ಯತಿಕರ ಜಾತಾ । ವಿಬುಧ ಸಂಘ ಸತತ ಸಮೇತಾ । ವಿಧಿ ಪಿತ ಗುರು ಜಗನ್ನಾಥಾ । ವಿಠಲಾ । ನಧಿಕನೆಂದೊರದ ವಿಖ್ಯಾತಾ ॥ ೩ ॥

## ೩೧ ಪದ—ರಾಗ—ಅಹರಿ—ಏಕತಾಳ—ಆರ್ಯಾವೃತ್ತ.

ರಾಘವೇಂದ್ರ ಯತಿ ಸಾರ್ವಭೌಮ ಮರಿ । ತೌಘ ದೂರತೇ ನಮೋ ನಮೋ । ಮಾಘವರಿಪು ಮತ । ಸಾಗರ ಮೀನ ಮಮಾಘ ವಿನಾ ಶನ ನಮೋ ನಮೋ । ಶ್ಲಾಘಿತ ಗುಣಗಣ ಸೂರಿ ಪ್ರಸಂಗ ಸ । ದಾಗ ಮಜ್ಞತೇ ನಮೋ ನಮೋ । ಮೇಘಶ್ಯಾಮ ಲಲಾಮಾ ರಾಧಕ । ಮೋಘ ಬೋಧತೇ ನಮೋ ನಮೋ ॥ ೧ ॥ ತುಂಗಭದ್ರ ಸು ತ । ರಂಗಿಣಿ ತೀರಗ । ಮಂಗಳ ಚರಿತ ಶುಭಾಂಗ ನಮೊ । ಇಂಗಿತಜ್ಞ ಕಾಳಿಂಗ ಮಥನಯದು । ಪುಂಗವ ಹೃದಯ ಸು । ಸಂಗನಮೋ । ಸಂಗಿರ ಚಿನ್ಹಿತ ಶ್ರೀಂಗಾರಾನನ ತಿಂಗಳ ಕರುಣಾಪಾಂಗ ನಮೊ॥ ಗಾಂಗೆಯ ಸಮಾ ಭಾಂಗ । ಕುಮತ ಮಾತಂಗ ಸಿಂಗಶಿತ ಪಿಂಗ ನಮೊ ॥ ೨ ॥ ಶ್ರೀಸು ಧೀಂದ್ರ ಕರಜಾತ ನಮೋ ನಮೋ । ಭೂಸುರಸುತ ವಿಖ್ಯಾತ ನಮೋ । ದೇಶಿಕ ವರ ಸಂಶೇವ್ಯ ನಮೋ ನಮೋ । ದೋಷವಿವರ್ಜಿತ ಕಾವ್ಯ । ನಮೊ । ಕ್ಲೇಶಿತ ಜನ ಪರಿಪಾಲ ನಮೊ ನಮೋ । ಭಾಸಿತ ಕರುಣಾ ಶೀಲ ನಮೋ ವ್ಯಾಸರಾಮ ಪದ ಭಕ್ತ ನಮೊ ನಮೋ । ಶಾಶ್ವಿತ ಕರುಣಾಸಕ್ತ ನಮೊ ॥೩॥ ಕೋವಿದ ಮಸ್ತಕ ಶೋಭಿತ ಮಣಿ ಸಂ । ಭಾವಿತ ಸುಖಪ್ರದ

ಪಾಲಯಮಾಂ ಸೇವಾಪರ ಸರ್ವಾರ್ಥಪ್ರದ ವೃಂ | ದಾವನ ಮಂದಿರ ಪಾಲಯಮಾಂ | ಭಾವಜ ಮಾರ್ಗಣ ಭುಜಗ ವಿನಾಯಕ | ಭಾವಜ್ಞ ಪ್ರಿಯ ಪಾಲಯಮಾಂ | ಕೇವಲ ನತಜನ | ಪಾವನರೂಪಿ ಸ | ದಾ ವಿನೋದ ಹೇ ಪಾಲಯಮಾಂ || ೪ || ಸನ್ನುತ ಮಹಿಮ ಜ | ಗನ್ನಾಥ ವಿಠಲ | ಸನ್ನಿಹಿತ ಸುಮಾನಸ ಜಯ ಜಯ ಭೋ | ಚಿನ್ಹಿತ ಪುಂಡ್ರ ಕಮಂಡುಲ ದಂಡ ಪ್ರ | ಪನ್ನ ಭಯಾಪಹ ಜಯ ಜಯ ಭೋ ಮಾನ್ಯ ಮಹತ್ಮ ಪ್ರ| ಸನ್ನ ವದನ ಕಾ | ರುಣ್ಯ ಪಯೋಧದ ಜಯಜಯ ಭೋ | ಧನ್ನ್ಯೈ ಕ್ಷಮಾ ಸಂಪನ್ನ ಬುಧಜನಶ | ರಣ್ಯೈ ಶಾಶ್ವತ ಜಯ ಜಯ ಭೋ || ೫ ||

**೩೨ ಪದ—ರಾಗ—ಭೈರವಿ—ಅಟ್ಟತಾಳ.**

ನಮಿಸಿ ಬೇಡುವೆ ವರಗಳ ನಿನ್ನಾ ನಂ | ಯಮಿ ಕುಲೋತ್ತಮ ರಾಘವೇಂದ್ರರನ್ನ || ಪಲ್ಲ || ವಿಮಲಾ ಸುಮತಿ ಜನರತಿ ಪ್ರೀಯಾ | ಪಾದ ಕಮಲಗಳಿ ಗೆರಗುವೆನೊ ಜೀಯಾ | ಶಮಲಾ ಮಾರ್ಗದಲಿ ಮತಿಯ ನೀಡದಿರೋ | ಅಮಿತ ಕರುಣದಿ ಪಿಡಿಯೋ ಕೈಯ್ಯಾರಾಯಾ || ೧ || ಕಂಡವರ ಬೇಡಿ ಬೇಡಿ ನೊಂದೆ | ಸಕಮಂಡುಲಾದಂಡ ಧಾರಿ | ನೀಗತಿ ಎಂದೇ || ಪಂಡಿತಾಗ್ರಗಣ್ಯ ಇನ್ನಾದರೂ ಮುಂದೇ | ಕೋದಂಡ ಪಾಣಿ ಪಾದವಾ ತೋರಿಸುತಂವೆ ರಾಯಾ || ೨ || ಶ್ರೀಸುಧೀಂದ್ರ ಯತಿ ಕರಕಂಜಜಾತಾ | ತುಂಗಾ | ಸೂ ನದಿ ನಿಲಯಾಘಾಂಬುದಿ ಪೋತಾ || ವಾಸುಕಿಶಯನಾ ಗುರು ಜಗನ್ನಾಥಾ ವಿಠಲಾ ದಾನರಾ ಪೋಷಕ ಲಾಲಿ ಸೆನ್ನ ಮಾತಾ ರಾಯಾ || ೩ ||

**೩೩ ಪದ—ರಾಗ—ಪೂರ್ವಿ—ಅಟ್ಟತಾಳ.**

ರಾಘವೇಂದ್ರ ಗುರುರಾಯ ಘೋರ | ಪಾಪೌಘಗ ಳೆಣಿಸದೆ ಪಾಲಿಸು ಬಿಡದೆ | ರಾಘವೇಂದ್ರ || ಪಲ್ಲ || ಪ್ರಕಟಿಸಿ ತೋರಿದೆ | ಮುಕು ತಿಯು ಬೇಡಿದ || ಭಕತನ ಯೋಗ್ಯತೆ | ನಿಖಿಳ ಜನರಿಗೆ || ೧ || ಕನಲಿದ

ಜನಪನ । ಅನುನಯುದಲಿ ನಿಮ್ಮನುಗಸ ಮಾಡಿದ । ಘನತರ ಚರಿತಾ ॥ ೨ ॥ ಪತಿತನ ನಿಜಯೋಗ್ಯತಿಯ ತಿಳಿದು ಸದ್ಗ । ತಿಯ ಪಾಲಿಸಿದಿ । ಯುತಿ ಕುಲವರಿಯಾ ॥ ೩ ॥ ದ್ವಾದಶ ವರುಷ । ಸ್ನೋದಕಸಲಿಸಿದೆ ॥ ಮೇದಿಸಿ ಪತಿಗೆ ಮ । ಹಾ ದಯವಂತ ॥ ೪ ॥ ಕ್ಷೀಪ್ರದಿ ತೋರಿದೆ । ವಿಪ್ರರ ಮಹಿಮಿಯ । ಸುಪ್ಪಥಿ ವೀಶಗೆ । ಅಪ್ರತಿ ಗುರುವೆ ॥ ೫ ॥ ವಿಪಿನದಿ ಚಂಡಾ । ತಪದಿ ಬೆಂದ ಕಾ । ಶ್ಯಪಿ ಸುರರುಳಿಹಿದ । ಕೃಪಣ ಜನಾಪ್ತ ॥ ೬ ॥ ಹುತವಹಗುಣಿಸಿದ । ರತುನ ಮಾಲಿಕಿಯ । ಕ್ಷಿತಿ ಪತಿಗೆ ತಂದಿ । ತ್ತತುಳ ಮಹಿಮನೆ ॥ ೭ ॥ ಭೃತ್ಯಗೆ ಬಂದವ । ಮೃತ್ಯು ಬಿಡಿಸಿ ಸುಖ । ವಿತ್ತು ಪೊರವೆ ಪುರುಷೋತ್ತಮ ದಾಸಾ ॥ ೮ ॥ ಪೊಳಲ ಮಾರ್ಗದೊಳು । ಲಲನೆ ಪ್ರಸೂತಿನೆ । ಪ್ರೀಸ ಕಮಂಡುಲ । ದೊಳು ಜಲ ತೋರ್ದೇ ॥ ೯ ॥ ಬಿಸಲಿಂದ ಬಳಲುವ । ಶಿಶುವಗೆ ಜ್ಯೈಲಾ । ಗಸದಿ ನಿಲ್ಲಿಸಿದ । ಅಸಮ ಮಹಿಮನೆ ॥ ೧೦ ॥ ಚ್ಯುತ ಫಲರನದಿ । ಪ್ರೋತ ಮುಳುಗೆ ಮೃತಿ । ಭೀತಿ ಬಿಡಿಸಿದ ಅ । ನಾಥ ರಕ್ಷಕಾ ॥ ೧೧ ॥ ಯತಿವರ ದೂರದಿ । ವೃತಿಗೈಲಾಗಸ । ವಥವಲಿ ಕಂಡಾ । ನತಿಸಿದ ಮಹಿಮಾ । ॥ ೧೨ ॥ ಅನಿವೇದಿತ ಭೋಜನ ವಸ್ತುಗಳಿಂ । ದನುಭವಮಾಡಿಸಿ ದನು ಪಮಚರಿತಾ ॥ ೧೩ ॥ ಭಾಷಾತ್ರಯ ಯುತ । ವ್ಯಾಸೋಕ್ತಿಗಳ ಪ್ರ । ಕಾಶವ ಗೈಸಿದ । ಭೂಸುರ ವಿನುತಾ ॥ ೧೪ ॥ ಪಾದೋದಕವ ದಿನೇ ದಿನೆ ಸೇವಿಸಿ । ಸಾಧುಗಳಾಧಿ । ವ್ಯಾಧಿಗಳಳಿವೆ ॥ ೧೫ ॥ ಸಾದರವಲಿ । ಹಸ್ತೋದಕ ಕೊಡಲು ನಿ । ಷೇಧ ಗೈಯದೆ । ನಿವೇದಿಪ ಹರಿಗೆ ॥ ೧೬ ॥ ದಾತ ಗುರು ಜಗ । ನ್ನಾಥ ವಿಠಲನ । ದೂತನೆ ಮಂತ್ರ ನಿ । ಕೇತನ ನಿಲಯ ॥ ೧೭ ॥

## ೩೪ ಪದ—ರಾಗ— ಯರಕಲಕಾಂಬೋದಿ—ಆದಿತಾಳ.

ಹೊಂದಿ ಬದುಕಿರೊ ರಾಘವೇಂದ್ರರಾಯರ । ಕುಂದದೆಮ್ಮನು ಕರುಣದಿಂದ ಪೊರವನೊ ॥ ಪಲ್ಲ ॥ ನಂಬಿ ನುತಿಸುವ ಜನಕ । ದಂಬ ಕಿಷ್ಟವ । ತುಂಬಿ ಕೊಡುವನು । ಅನ್ಯ । ರ್ಥಂಬಲೀಯನು ॥ ೧ ॥ ಫಾಲಲೋಚನ

ಮಿನುತ । ಮೂಲ ರಾಮನಾ । ಶೀಲಸದ್ಗುಣಾ । ನೆನವ । ಶೀಲನು ದಿನಾ ॥ ೨ ॥ ಅಲವ ಬೋಧರಾ । ನುಮತ । ಜಲಧಿ ಚಂದಿರ । ಪೊಲಿದು ಭಕ್ತರಾ । ಪೊರೆವ । ಸುಲಭ ಸುಂದರಾ ॥ ೩ ॥ ಗುರುಸು ಧೀಂದ್ರರಾ । ವಿಮಲ । ಕರಜ ರೆನಿಸಿವರಾ । ಸ್ಮರಿಸು ಸುರುಚಿರಾಯುಗಳ । ಚರಣ ಪುಷ್ಕರಾ ॥ ೪ ॥ ಭೂತ ಭಾವನಾ ಜಗನ್ನಾಥ । ವಿಠಲನಾ । ಪ್ರೀತಿ ಪಾತ್ರನಾ । ನಂಬಿ । ರೀತಸೀಕ್ಷಣಾ ॥ ೫ ॥

## ೩೫ ಪದ—ರಾಗ—ವಸಂತಭೈರವಿ—ಝಂಪಿತಾಳ.

ವಂದಿಸುವೆ ಗುರು ರಾಘವೇಂದ್ರಾರ್ಯರ । ವೃಂದಾವನಕೆ ಪ್ರತಿ ಪ್ರತಿ ದಿನಗಳಲ್ಲಿ । ವಂದಿಸುವೆ ಗುರು ರಾಘವೇಂದ್ರಾರ್ಯರಾ ॥ ಪಲ್ಲ ॥ ಸುವಿರೋಧಿ ವತ್ಸರದಿ ಶ್ರಾವಣ ಪರದ್ವಿತಿಯ । ಕಪಿವಾರತುಂಗ ಭದ್ರಾ ತೀರಗಾ । ನವ ಸುಮಂತ್ರಾಲಯದಿ ದೇಹವನು ಬಿಟ್ಟು ಮಾ । ಧವನ ಪುರವ ನೈದಿದ ಮಹತ್ಮರಿವರಹುದೆಂದು ॥ ೧ ॥ ಸ್ವಪದಾವಲಂಬಿಗಳಿ । ಗುಪನಿಷತ್ ಸಿಂಧಾರ್ಥ । ಉಪದೇಶ ಗೈಸಿಕಾ । ಶ್ಯಪಿಯ ಪೊಳಗೆ ॥ ಪ್ರಪುಸೀತ ರನು-ಮಾಡಿ । ಅಪವರ್ಗದೆಗೆ ಸುರರೊ । ಳುಪಮರಿಲ್ಲೆಂದ ರುಪಿ । ದುಪಕಾರಿಗಳ ಕಂಡು ॥ ೨ ॥ ದೇವತೆಗಳಿವರು ಸಂದೇಹ ಬಡ ಸಲ್ಲಾ ವೃಂ । ದಾವನವ ರಚಿಸಿ ಪೂಜಿವ ಭಕ್ತರ । ಸೇವೆ ಕೈಕೊಂಡವರು ಮನೋರಥವ । ಶ್ರೀವರ ಜಗನ್ನಾಥ ವಿಠಲಗೆ ಪ್ರೀಯರೆಂದು ॥ ೩ ॥

## ೩೬ ಪದ—ರಾಗ—ಸುಮ್ವಿಪದ—ಝಂಪಿತಾಳ

ಶ್ರೀ ರಾಘವೇಂದ್ರ ಪ್ರತಿ ವಾರಂಗಳಲಿ ನಿಮ್ಮ । ಚಾರು ಚರಣಗಳಿ ಗೆರಗುವೆ ॥ ಎರಗುವೆನು ಸದ್ಭಕ್ತಿ ವೈರಾಗ್ಯಕೊಟ್ಟು ಸಲಹುವೀ ॥ ೧ ॥ ರಾಯ ರಾಘವೇಂದ್ರ ಹೇಯ ಸಂಸಾರದೊಳು । ಕಾಯಬೇಕೆಮ್ಮ ಕರುಣದಿ ॥ ಕರುಣದಿಂ ಕಾಯದಿರೆ ನ್ಯಾಯವೆ ನಿನಗೆ ಮುನಿರಾಯಾ ॥ ೨ ॥ ಶ್ರೀಸು ಧೀಂದ್ರ ಕುಮಾರ ಯೋಸು ಮಾತುಗ ಳ್ಯಾಕೆ । ದಾಸನಾ ಭಾರ ಪೊಷಿ ಸೋದು ॥ ಪೊಷಿಸಿ ಇಹಪರದಿ ಪೊರೈಸುವದೆಮ್ಮ ಅಭಿಲಾಷಾ ॥ ೩ ॥

ಇಷ್ಟೇ - ಅರ್ಥಾಶಿಕ್ಕಿದೆ.

## ೩೭ ಪದ—ರಾಗ—ನಾಟಿ—ಝಂಪಿತಾಳ.

ನಮೋ ನಮೋ ಶ್ರೀರಾಘವೇಂದ್ರ ಸದ್ಗುಣಸಾಂದ್ರ । ಕಮಲನಾಭನ ದಾಸ ಕಮಲಾಪ್ತ ಭಾಸಾ ॥ ಪಲ್ಲ ॥ ದೇಶ ದೇಶಗಳಿಂದ ದೈನ್ಯದಿಂದಲಿ ಬಂದಾ । ಶೇಷ ಜನರುಗಳಿಗಿಷ್ಟ ಸಲ್ಲಿಸುವ ವಿಶಿಷ್ಟಾ । ನಾ ಸೇರಿದೆನೊ ನಿನ್ನ ಸಹಿತ ಜನರ ಪ್ರಸನ್ನ । ಭಾಸುರಾ ಚರಿತನೆ ಭಜಿಸುವೆನು ಅನವರತ ॥ ೧ ॥ ಭೇದಾರ್ಥ ಜಲಜಾರ್ಕ । ಭೂರಿ ಬಲತರ ತರ್ಕ । ವಾದಿ ಶೈಲಕುಲಿಶ ವರಹ ಸುತೀರ್ಥನಾ ॥ ಬಾಧಿಪ ಅಘಜೀರ್ಣ ಮಾಡು । ಗುರುವರ ಪೂರ್ಣ । ಬೋಧ ಮತ ಸಂಭೂತ ಭೂರಿ ವಿಖ್ಯಾತಾ ॥ ೨ ॥ ನತಜನಾಶ್ರಯ ಪ್ರಿಯ ನೆರೆನಂಬಿದೆನೊ ಮಾಯ । ಮತ ಕದಳಿ ಗಜೇಂದ್ರ । ವಿಭುದಾಬ್ಧಿ ಚಂದ್ರಾ । ಕೃತ ಭುಕು ಜಗನ್ನಾಥವಿಠಲನ ನಿಜದೂತ । ತುತಿಸಲಾಪೆನೆ ನಿನ್ನಯುತಿ ವಿರೋಧಿಸನ್ನ ॥ ೩ ॥

## ೩೮ ಪದ—ರಾಗ—ಕಾಂಬೋದಿ—ಝಂಪಿತಾಳ.

ಸ್ಮರಿಸಿ ಬದುಕುವೆನಾ ಸದ್ಗುರು ಸಾರ್ವಭೌಮಾ ॥ ಪಲ್ಲ ॥ ನಿರುತನೀ ಪೊರೆ ಎನ್ನ ವಾದಿಗಜ ಸಿಂಹ ॥ ಅ ಪಲ್ಲ ॥ ದಿತಿಸುತಗೆ ಸುತನೆನಿಸಿ । ಅತಿ ಮುದದಿಂದ ಮನಸಿಂದ । ಮತವಿಡಿದು ಹರಿಯು ಮಹಿಮೆ ಪಿತಗೆ ಪೇಳಿ । ಖತಿಗೊಂಡು ನಿನ್ನ ಮೂರುತಿ ತೋರಿಸಲು । ಶ್ರೀಪತಿಯು ಸ್ತಂಭದಿ । ಕರೆದ ಪ್ರಲ್ಹಾದ ರಾಜ ॥ ೧ ॥ ಬಾಲ್ಯದಲಿ ಯತಿಯಾಗಿ ಲೀಲೆಯಿಂದಲಿ । ಭೂಮಿ । ಪಾಲಗೊದಗಿರ್ದ ಕುಹುಯೋಗ ಬಿಡಿಸಿ ॥ ಖೂಳ ಮಾಯ್ಗಳ ಜಯಿಸಿ ಚಂದ್ರಿಕಾ ಗ್ರಂಥವನು । ಪೇಳಿದರಿ ಪೀಠವೇರಿದ ವ್ಯಾಸರಾಜ ॥ ೨ ॥ ಕಾಮರಿಪುನುತ ಮೂಲರಾಮ ಪದಯುಗ ಕುಮುದ । ಸೋಮನೆನಿಸುವ ಭಕ್ತಸೋಮಕೆಲ್ಲ ॥ [ಪ್ರೇ] ನೇಮದಿಂದಲಿ ವಿವಿಧ । ಕಾಮಿತಾರ್ಥ ಸ್ಫುಟಿತ । ಹೇಮ ಸನ್ನಿಭ ಗಾತ್ರ ಪಾವನ ಚರಿತ್ರ ॥ ೩ ॥ ಶಾಂತತೆಯ ಪೊಂದಿ ಮಂತ್ರಾಲಯದಿ ವೃಂದಾವ । ನಾಂತರದೊಳಿರುತ ಶಿರಿ ಕಾಂತಹರಿಯಾ । ಚಿಂತಿಸುತಲಿಹ ಸರ್ವತಂತ್ರ ಸ್ವತಂತ್ರ ಕರು । ಣಾಂತ

ರಂಗನೆ ರಾಘವೇಂದ್ರ ಯತಿವರ್ಯಾ ॥ ೪ ॥ ಮೂಕಬಧಿರಾಂಧತ್ವಗಳ ಪೊಂದಿ ಧರಣಿಯೊಳು ವ್ಯಾಕುಲವ ಪಡುವವರ ನುದ್ಧರಿಸುತ । ನಾಕಪತಿ ವಿನುತ ಜಗನ್ನಾಥ ವಿಠಲ ಮಧುಪ । ನೀಕೊಟ್ಟು ಸಲಹೆನ್ನಭೀಷ್ಟ ಸಮುದಾಯ ॥ ೫ ॥

## ೩೯ ಪದ—ರಾಗ—ಮುಖಾರಿ—ಝಂಪಿತಾಳ.

ಸುರಪನಾಲಯದಂತೆ ಮಂತ್ರಾಲಯಾ । ಕರೆಸುವದು ಕಂಗೊಳಿಸುವದು ನೋಳ್ಪ ಜನಕೆ ॥ ಪಲ್ಲ ॥ ಕಾಮಧೇನುವಿನಂತೆ ಇಪ್ಪ ಗುರುವರ ಸಾರ್ವ । ಭೌಮ ಸುಧಿಯೀಂದ್ರ ನುತ ರಾಘವೇಂದ್ರ ॥ ಆಮಯಾಧಿಪ ಖಳತಮಿಶ್ರ ವೋಡಿಸುವ ಚಿಂ । ತಾಮಣಿ ಪ್ರಕಾಶವಂತಿಪ್ಪ ವೃಂದಾವನದಿ ॥ ೧ ॥ ಸುರತರು ವಿನಂತಿಪ್ಪ ಕೀರ್ತಿ ನಚ್ಛಾಯಾ ಶ್ರಿ । ತರ ಮನೋರಥಗಳನು ಪೂರೈಸುವಾ ॥ ಧರಣಿ ಸುರಾಖ್ಯ ಷಟ್ಪದಗಳಿಗೆ ನತ್ಸದಾ । ಪರಿಮಳದಿ ತೃಪ್ತಿ ಒಡಿಸುವ ಮರುತನಂತೆ ॥ ೨ ॥ ಪಾರಾಹಿ ಎಂಬ ನಂದನವನದಿ ಜನರತಿ ವಿ । ಹಾರ ಮಾಳ್ಪರು ಸ್ನಾನ ಪಾನದಿಂದಾ ॥ ಶ್ರೀ ರಾಘವೇಂದ್ರ ನಿರ್ಲಿಪ್ತ ಕಾರಣ ವರಮ । ಕಾರುಣ್ಯನಿಧಿ ಜಗನ್ನಾಥ ವಿಠಲ ನಿಹನು ॥ ೩ ॥

## ೪೦ ಪದ—ರಾಗ—ಕಾಂಬೋದಿ—ಏಕತಾಳ.

ಮಂಗಳಂ ಶ್ರೀ ರಾಘವೇಂದ್ರಗೆ । ಶುಭ । ಮಂಗಳ ಸುಜನಾಂಬುಧಿ ಚಂದ್ರಗೆ ॥ ಪಲ್ಲ ॥ ಶ್ರೀಸುಧೀಂದ್ರ ಕುಮಾರಗೆ ಮಂಗಳ । ಭೂಸುರನುತ ಮಹಿಮಗೆ ಮಂಗಳ । ದೇಶಿಕ ಕುಲ ವನಜಾರ್ಕಗೆ ಮಂಗಳ । ಭಾಸುರ ಕೀರ್ತಿಯ ಪಡದಸಿಗೆ ॥ ೧ ॥ ವೃಂದಾವನ ದಿವಿಯೊಳಗೆ ಸುರದ್ರುಮ । ದಂದದಿ ರಾಜಿಸುವಗೆ ಮಂಗಳ ॥ ಅಂಧಪಂಗು ಮೂಕ ಬಧಿರ ರೀಪ್ಸಿತ । ಸಂದೋಹವ ಸಲಿಸುವ ಮುನಿಗೆ ॥ ೨ ॥ ಭೂತ ಪ್ರೇತ ವೇತಾಳ ಭಯ ವಿಪಿನ । ವೀತಿಹೋತ್ರ ನೆನಿಪಗೆ ಮಂಗಳ । ವಾತ ಜನಕ ಜಗನ್ನಾಥ ವಿಠಲನ । ದೂತರ ಸಲಹುವ ದಾತನಿಗೆ ॥ ೩ ॥

## ಶ್ರೀ ಪ್ರಾಣೇಶವಿಠಲ.

### ೪೧ ಪದ—ರಾಗ—ವರಾಳಿ—ಅಟ್ಟತಾಳ.

ರಾಘವೇಂದ್ರ ನಿನ್ನಪಾದ ಸರಸಿಜಕೆ । ಬಾಗುವೆ ಮನ್ಮನ ಹರಿಕೆ ಪೂರೈಸೊ ॥ ರಾಘ ॥ ಪಲ್ಲ ॥ ವಾಸುದೇವಾರ್ಚಕ ಭೂಸುರ ವಂದಿತ । ದೋಷವ ಕಳೆವುದು ದೇಶಿಕವರ್ಯ ॥ ೧ ॥ ವಿಷಯಂಗಳೆಲ್ಲ ನಿಪಿಸಿ ಯೋಗಮಾರ್ಗದಿಂ । ವಸುದೇವ ಪುತ್ರ ನೊಲಿಸಿಕೊಂಡ ಶಕ್ತ ॥ ೨ ॥ ಭೂತಪ್ರೇತಗಳ ಬಲಾತುರದಲಿ ಕಳೆವಾ । ತುಂಗಮುಪಿಮನೆ ಭೂತಳದೊಳಗೆ ॥ ೩ ॥ ಅಂಗಜ ಶರದೂರ ಮಂಗಳ ವಿಗ್ರಹ । ತುಂಗತೀರವಾಸ ಪಿಂಗಳ ತೇಜ ॥ ೪ ॥ ದಂಡಕಾಷಾಯ ಕಮಂಡುಲಧರ ಪ್ರ । ಚಂಡ ಮಹಾತ್ಮನು ಪಂಡಿತರೊಡೆಯ ॥ ೫ ॥ ನಾರುವ ಶರಣರ ಘೋರಿಸುತಿಪ್ಪ ಸಂ । ಸಾರ ಕಡಲಿಗೆ ಕರೀರ ಸಂಭವನೆ ॥ ೬ ॥ ಮೊರೆ ಹೊಕ್ಕ ದಾಸರ ಮರೆಯದೆ ಸಲಹಯ್ಯ । ಪರಮತ ಉರುಗಕೆ ಗರುಡ ನೆನಿಪನೆ ॥ ೭ ॥ ತಂದೆ ಪಾಲಿಸು ದಯಾಸಿಂಧು ಜಗದ್ಗುರು । ಮಂದಮತಿಗಳೆಂಬ ಇಂಧನಕ್ಕನಲ ॥ ೮ ॥ ವಟುವಪು ಪ್ರಾಣೇಶವಿಠಲನ ನಿಜದಾಸ । ನಟೆಯಲ್ಲ ಸಂಸಾರ ಕಟಕಟ ಬಿಡಿಸೊ ॥ ೯ ॥

### ೪೨ ಪದ—ರಾಗ—ಕಾಂಬೋದಿ—ಅಟ್ಟತಾಳ.

ಸುಪ್ವಿ ಸುವ್ವಾಲೆ । ಸುಪ್ವಿ ಸಾಧ್ವಿಯರು ರಾಘವೇಂದ್ರರ ಪಾಡಿ ॥ ಸ. ॥ ॥ ಪಲ್ಲ ॥ ಅಂದಿನ ಕಾಲದ ಮಧ್ವಶಾಸ್ತ್ರ ಮನಕೆ ತಂದು । ಅಂದದಿಟಪ್ಪಣಿ ಮಾಡಿದ ದೇವರಾರು ॥ ಸುಪ್ವಿ ॥ ಅಂದು ವಾದಿಸಿದ ಜನರನ್ನು ಬಾಯಿ ಮುಚ್ಚಿಸಿದ । ಚಂದಿರ ವದನೆ ಈತ ನಮ್ಮ ಗುರುವು ॥ ೧ ॥ ಇವರ ಚರಿತೆಯನ್ನು ತೋರಿದಷ್ಟು ತುತಿಸುವೆ । ಕಿವಿಗೊಟ್ಟು ಕೇಳುವದು ಬುಧಜನರು ॥ ಸುಪ್ವಿ ॥ ಪವನಾಂಶರಿವರು ಕವಲಿಲ್ಲ ಖ್ಯಾತರಾಗಿ । ಅವನಿಯ ಸುರರಿಂದರ್ಚನೆ ಗೊಂಬುವರು ॥ ಸುಪ್ವಿ ॥ ೨ ॥ ಅಷ್ಟಾಕ್ಷರ ಮಂತ್ರವನು ತಪ್ಪದಲೆ

ನಿತ್ಯವಾಗಿ । ನಿಷ್ಠೆಯಿಂದ ಭಜಿಸಲು ಭೂತ ಭಯವು ॥ ಸುವ್ವಿ ॥ ೨ ॥
ಕುಷ್ಠ ರೋಗ ಕ್ಷಯ ಪಾಂಡು ಜ್ವರ ಸನ್ನಿ ಮೊದಲಾದ । ಅಷ್ಟುಪದ್ರ
ವಾಕ್ಷಣ ಬಿಟ್ಟು ಓಡುವವು ॥ ಸುವ್ವಿ ॥ ೩ ॥ ಮೃತ್ತಿಕ ಮಾಲೆ ಅಂಗಾರ
ದಿವ್ಯ ಮಂತ್ರಾಕ್ಷತೆಯು । ಹತ್ತಿಲಿರಲು ಕ್ಲೇಶವ ಲೇಶಕಾಣರು ॥ಸುವ್ವಿ॥
ಎತ್ತ ಹೋದರು ಜನರಿಗೆ ಜಯಪ್ರದ ತೋರುವದು । ತತ್ತಲಿಲ್ಲ ಶತಸಿದ್ಧ
ಮತ್ತೇನು ಕೇಳಿ ॥ ಸುವ್ವಿ ॥ ೪ ॥ ಪಂಡಿತರು ಮೊದಲಾಗಿ ಹಸ್ತಿ ಉಷ್ಟ್ರ
ಕುದುರೆಯು । ಹಿಂಡುಗಳು ತೃಷೆಯಿಂದ ಬಳಲುತಿರೆ ॥ ಸುವ್ವಿ ॥ ದಂಡ
ಜಗತಿಗೂರಿ ತೋಯತೆಗಸಿಯುವನಿ । ಮಂಡಲದೊಳಗೆ ಪೆಸರಾದರಿವರು
॥ ೫ ॥ ಕಟ್ಟಲಿಯ ಭತ್ತದೊಳು ಭೂಪನಳಯುಕ್ತಬರ । ಲಟ್ಟಿಕೊಂಡು
ಉಣಿಸಿ ಉತ್ತಮ ಪರವ ॥ಸುವ್ವಿ॥ ಕೂಟ್ಟುಕಳಿಸಿದ ಮೇಲೆ ಅನ್ನ ಕೊಂಚಿ
ಯಾಗಲಿಲ್ಲ । ಗಟ್ಟಿ ಸಂಕಲ್ಪರಿಸರು ಮುನಿವರರು ॥ ಸುವ್ವಿ ॥ ೬ ॥ ವಿಪ್ರ
ರೆಲ್ಲರು ಹೇಳಿಸಿ ಕಟ್ಟಿಸಿದ ಸದನವ। ಘಟ್ಟಿಸಿಕೆಡಿಸಿ ಭೂಪ ಮೆಚ್ಚುವಂದದಿ
॥ ಸುವ್ವಿ ॥ ಸೆಪ್ಪ ಧರಿಗಾಗಲೆಂದು ಗುರು ಸುಧೀಂದ್ರ ಕುಮಾರ । ಸರ್ಪನ
ತೋರಿಸಿ ಸುಪ್ರಖ್ಯಾತರಾದರು ॥ ಸುವ್ವಿ ॥ ೭ ॥ ದ್ವಿಜರ ಸ್ತೋಮವು
ಬಾಯಿಬಿಡುತಿರೆ ದಯದಿಂದ । ನಿಜಕಾಷ್ಟವಿಳಿಗೆ ನಿಲ್ಲಿಸಿ ಮರವ ॥ ಸುವ್ವಿ ॥
ಸೃಜಿಸಿ ಪಲ್ಲವ ಫಲಯುಕ್ತಾಗಿ ತೋರಿಸಿದ । ಭಜಿಸಿರಿವರನ್ನು ಮಕ್ಕಳು
ಬೇಡುವವರು ॥ ಸುವ್ವಿ ॥ ೮ ॥ ಮುತ್ತಿನ ಮಾಲಿಕೆ ನೃಪ ಭಕ್ತಿಯಿಂ
ಕೊಡಲಾಗಿ । ಸಪ್ತ ಜಿಂಹ್ವಗುಣಿಸಿದ ಸರ್ವರು ನೋಡ ॥ ಸುವ್ವಿ ॥ ಮತ್ತೆ
ಬೇಡಲು ಪಾವಕನಿಗೆ ಪ್ರಾರ್ಥನೆಯ ಮಾಡಿ । ಮರ್ತ್ಯನಗೆ ಇತ್ತರು ಮೊದ
ಲಂತೆಯೆ ತಂದು ॥ ಸುವ್ವಿ ॥ ॥ ೯ ॥ ಒಂದೆಮಾಡಿದ ದುಷ್ಕರ್ಮ ತೀರ
ಬಂದದನು ನೋಡಿ । ಬಂದಾಕ್ಷಣದಲ್ಲಿ ಅವನ ವಿಚಾರಿಸಿ ॥ ಸುವ್ವಿ ॥
ಇಂದಿರೇಶನ ಕಾರುಣ್ಯ ಬಲದಿಂದ ಜನ ನೋಡ । ಸಂದೇಹವಿಲ್ಲದೆ
ಸುಲೋಕವ ನಿತ್ತರು ॥ ಸುವ್ವಿ ॥ ೧೦ ॥ ತುಂಗಾತೀರ ಮಂತ್ರಾಲಯದಲ್ಲಿ
ಶ್ರಾವಣ ಬಹುಳ । ಮಂಗಳ ಬಿದಿಗಿಯಲ್ಲಿ ನಿವಾಸರಾದರು ॥ ಸುವ್ವಿ ॥
ಶೃಂಗರ ವೃಂದಾವನ ದ್ವಾದಶ ನಾಮ ಶ್ರೀ ಮುದ್ರೆಯು । ಕಂಗಳು ಸಾಲವು
ನೋಡ ಹೊದ್ದ ಶಾಠಿಯ ॥ ಸುವ್ವಿ ॥ ೧೧ ॥ ಅಂಧಕ ಬಧಿರ ಕುಂಟ

ನಾನಾ ರೋಗಿಗಳು ಮತ್ತೆ । ಕಂದ ವರ್ಜ್ಯ ಮೊದಲಾದವರಿಗೆ ಕಾಮ್ಯ ॥ಸುವ್ವಿ॥ ತಂದುಕೊಡುವರು ಬೇಗ ಇತರಸಂಶಯವಿಲ್ಲ । ಮಂದಭಾಗ್ಯರಿಗೆ ಇವರ ಸೇವೆ ದೊರೆಯದು ॥ ಸುವ್ವಿ ॥ ೧೨ ॥ ಕೌತುಕವೇನೆನ್ನಲಿ ಮುಂಜಿ ವಿವಾಹ ಮಾಡಿಸುವರು । ಚಾತುರ್ಮಾಸದೊಳಗೆ ಗ್ರಹಗಳಸ್ತವಾಗೆ ॥ ಸುವ್ವಿ ॥ ಧಾತಪಿತ ನಿಲಯ ವಿದೇಸೋಯೆಂದು ತೋರುವದು । ಪ್ರೀತಿಯುಳ್ಳ ಭಕ್ತರಿಗೆ ಅಧಮರಿಗಲ್ಲ ॥ ಸುವ್ವಿ ॥ ೧೩ ॥ ವಾದ್ಯ ಪೂರ್ವಾರಾಧನೆ ಉತ್ತರಾರಾಧನಿಗೆ । ಒಡ್ಡಿ ಬರುವದು ಎಂಟು ದಿಕ್ಕುಗಳಿಂದ ಜನವು ॥ ಸುವ್ವಿ ॥ ಕಡ್ಡಿ ಹಿಡಿಯದಂಥ ಸಂದಣಿಯೊಳು ಸನ್ಮುಹೂರ್ತದಿ । ದೊಡ್ಡ ರಥವೇರಿ ಮಠವ ಸುತ್ತುವರು ॥ ಸುವ್ವಿ ॥ ೧೪ ॥ ಇಷ್ಟೇಯೆನಲು ವಶವಲ್ಲ ಮಹಿಮೆಗಳಿನ್ನೂ ವುಂಟು । ನಷ್ಟವಮಾಡುವರು ದುರ್ಮತ ದಾರಿದ್ರ್ಯವ ॥ ಸುವ್ವಿ ॥ ಸೃಷ್ಟಿಗೊಡೆಯ ಪ್ರಾಣೇಶ ವಿಠಲನೆಂದು ಪೇಳ್ದರು । ಎಷ್ಟು ಪೇಳಿದರು ಎನ್ನಿಂದಲಿ ತೀರದು ॥ ಸುವ್ವಿ ॥ ೧೫ ॥

**೪೩ [ಮಂಗಳಪದ] ಪದ—ರಾಗ—ಭೈರವಿ—ಝಂಪಿತಾಳ.**

ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ಪಲ್ಲ ॥ ಯೊಗ್ರೇಂದ್ರ ತೀರ್ಥ ಕರ ರಾಜೀವ ಪೂಜಿತಗೆ । ಭಾಗವತ ಜನಪ್ರೀಯರೆನಿಸುವರಿಗೆ ॥ ಯೋಗಿಗಳಿಗಧಿಪತಿ ಸುಧೀಂದ್ರಕರಜಾತರಿಗೆ । ಬಾಗಿ ವಂದಿಪರ ಸಲಹುವ ಸ್ವಾಮಿಗೆ ॥ ೧ ॥ ವರತುಂಗಾ ತೀರ ಮಂತ್ರಾಲಯ ನಿಕೇತನಿಗೆ । ಧರಣಿ ಯೊಳಗಪ್ರತಿಮ ಚರಿತೆ ತೋರ್ವವಗೆ ॥ ಕುರುಡ ಕಿವುಡಾದಿಗಳ ಬಯಕೆ ಪೂರೈಪರಿಗೆ । ವರಸು ವೃಂದಾವನದಿ ಶೋಭಿಪರಿಗೆ ॥ ೨ ॥ ಆರಾಧನೆಯ ಜನರು ಮಾಡುವದು ನೋಡಲ್ಕೆ । ವಾರವಾರಕ್ಕಧಿಕ ವೆನೆಸುವರಿಗೆ ॥ ಮಾರರಮಣ ಪ್ರಾಣೇಶ ವಿಠಲನಂಘ್ರಿ ಜಲಜಲಕೆ । ಆರುಪದ ವೆನಿಪಗೆ । ಕರುಣಾಜಲಧಿಗೆ ॥ ಜಯ ॥ ೩ ॥

**೪೪ (ಮಂಗಳಪದ) ಪದ—ರಾಗ—ಭೈರವಿ—ಝಂಪಿತಾಳ**

ಜಯ. ಮಂಗಳಂ । ನಿತ್ಯ ಶುಭ ಮಂಗಳಂ ॥ ಪಲ್ಲ ॥ ಶ್ರೀರಾಮ ಚಂದ್ರಾಂಘ್ರಿ ಸರಸೀರುಹಭೃಂಗನಿಗೆ । ಧೀರ ಸುಧಿಯೀಂದ್ರ ಕರಸಂಭೂತಗೆ ॥

ವಾರಾಹಿತೀರ ಮಂತ್ರಾಲಯ ನಿಕೇತನಿಗೆ। ಶ್ರೀ ರಾಘವೇಂದ್ರ ರಾಯರ ಚರಣಕೆ ॥ ೧ ॥ ಪರಮತಧ್ವಾಂತ ಭಾಸ್ಕರಗೆ ಸ್ವರ್ಣಾಭಗೆ । ಶರಣರಭಿಲಾಷೆ ಪೂರೈಸುವರಿಗೆ ॥ ದರುಶನಾದಿ ತ್ರಿಭಾಷದರ್ಥ ಬಲ್ಲವರಿಗೆ। ಮರುತ ಮತಕಡಲಿ ಗುಡುಪತಿ ಎನಿಪಗೆ ॥ ೨ ॥ ಪ್ರಾಣೇಶ ವಿಠಲ ನವರೊಳು ಪ್ರೀತಿಯುಳ್ಳವಗೆ। ಕ್ಷೋಣಿಯೊಳು ಸರಿಯಿಲ್ಲದ ಮಹಿಮನಿಗೆ॥ ಧ್ಯಾನಕ್ಕೆ ಬಂದೊದಗುತಿಪ್ಪ ಗುರುರಾಯರಿಗೆ। ಮೀನಾಂಕ ಜಿತಗೆ ವೇಶಿಕವರ್ಯಗೆ ॥೩॥

### ೬೫ ಪದ—ರಾಗ—ಸೌರಾಷ್ಟ್ರ—ಅಟ್ಟತಾಳ.

ಮಂಗಳಂ ಮಂಗಳಂ। ಜಯಮಂಗಳಂ ಶ್ರೀ ಸುಧೀಂದ್ರಾಬ್ಧಿ ಜ ಚಂದ್ರ ॥ ಮಂಗಳಂ ॥ ಪಲ್ಲ ॥ ನಾಭಿಜ ನಾಭಿಜ ನಾಭಿಜ ಪದಕಂಜ [ ಜಿತಕಂಜ ] ಶೋಭಿತಕೇಳಿ ಬಿಡವೆಮ್ಮನಾಳಿ ॥ ೧ ॥ ಕೋಲಜ ಕೂಲ ಸುಸ್ಸೀಲ ಮಂತ್ರಾಮಂದಿ। ರಾಲಯ। ವಾಲಯ ಪಾಲಯ ಮಾಂ ಗುರು ॥ ೨ ॥ ಏನೇನು ಮಾಡಲು ನೀನೊಲಿಯುವಲೆಂದು। ಪ್ರಾಣೇಶ ವಿಠಲನ ಕಾಣರೊ ಜನರು ॥ ೩ ॥

## ಶ್ರೀದವಿಠಲ

### ೬೬ ಪದ—ರಾಗ—ಜಂಜೂಟಿ—ಆದಿತಾಳ.

ರಾಘವೇಂದ್ರ ಗುರುರಾಯರ ಸೇವಿಸಿರೋ। ಸೌಖ್ಯದಿ ಜೀವಿಸಿರೊ। ಹ್ಯಾಗು ತುಂಗಾ ತೀರದಲ್ಲಿ ನಿಂದು । ವಿಹರಿಸುತರಿಂದೂ ॥ ಪಲ್ಲ ॥ ಶ್ರೀಸುಧೀಂದ್ರಕರ ಸರೋಜ ಸಂಜಾತಾ। ಜಗದೊಳಗೆ ಪುನೀತ। ದಾಶರಥಿಗೆ ದಾಸತ್ವವ ತಾನೊಪಿಸಿ ದುರ್ಮತವನು ಜೈಸಿ। ಈಸಮೀರ ಮತ ಸಂಸ್ಥಾಪಕರಾಗಿ। ನಿಂದಕರನು ನೀಗಿ। ಭೂಸುರರಿಗೆ ಸಂಶೇವ್ಯ ಸದಾಚರಣೀ। ಕಂಗೊಳಿಪುದು ಕರುಣೀ ॥ ೧ ॥ ಕುಂದವ ವರಮಂತ್ರಾಲಯದಲ್ಲಿರುವ। ಕರದಲ್ಲಿಗೆಬರುವ। ಸಂದರುಶನ ಕೊಟ್ಟು ಮಹತ್ಪಾಪ ಕಳಿವಾ। ಮನದೊಳು ತಾ ಪೊಳೆವಾ। ವೃಂದಾವನ ಗತ ವೃತ್ತಿಗೆ ಜಲಪಾನಾ। ಮುಕ್ತಿಗೆ ಸೌಪಾನ। ಮಂದಭಾಗ್ಯರಿಗೆ ದೊರೆಯದಿವರನೇವಾ। ಶರಣರ ಸಂಜೀವಾ ॥ ೨ ॥ ಶ್ರೀದವಿಠಲನ ಸನ್ನಿಧಾನ ಪಾತ್ರಾ। ಸಂಸ್ತುತಿಸಿದ

ಮಾತ್ರ । ಮೋದ ಬಡಿಸುತಿಹ ತಾನಿಹ ಪರದಲ್ಲಿ । **ಈತಗೆ ಸರಿ ಎಲ್ಲಿ** । ಮೇದಿನಿ ಯೊಳಗಿನ್ನರಸಲು ನಾಕಾಣೆ । **ಪುಶಿಎಲ್ಲೆನ್ನಾಣೆ** । ಪಾದಸ್ಮೃತಿ ಯನು ಮಾಡದವನೆ ಪಾಪಿ । ನಾ ಪೇಳ್ವೆನು ಸ್ಥಾಪಿ ॥ ೩ ॥

## ಶ್ರೀ ಗುರುಶ್ರೀಶ ವಿಠ್ಠಲ.

### ೬೭ ಪದ—ರಾಗ—ಧನ್ಯಾಸಿ—ಝಂಪೆತಾಳ.

ನೋಡೆಲೆ ಮನವೆ **ಕೊಂಡಾಡು** ಗುರುಗಳ ಪಾದ । **ಈಡು** ಇಲ್ಲವೊ **ಪುಣ್ಯ**ಕೆ । ನಾಡೊಳಗೆ ಗುರು ರಾಘವೇಂದ್ರರಾಯರ ಸೇವೆ ಮಾಡಿದವ ಪರಮ ಧನ್ಯಾ ಮಾನ್ಯ ॥ಪಲ್ಲ॥ ನಿಷ್ಠೆಯಿಂದನು ಸರಿಸೆ ಕಷ್ಟಗಳು ದೂರ ಮನೊಭೀಷ್ಟಿಗಳ ಪೂರೈಪರೊ॥ ಅಷ್ಟ ಸೌಭಾಗ್ಯವನು ಕೊಟ್ಟು ಸುಜನರಿಗೆ ।ಶ್ರೀ। ವಿಷ್ಣು ದಾಸ್ಯವ ತೋರ್ಪರೊ ॥ ದೃಷ್ಟಿಯಿಂದಲಿ ನೋಡಲನೇಕ ಜನ್ಮದ ಪಾಪವು ಬಿಟ್ಟು ಪೋಪವು ಕ್ಷಣದಲಿ । ಎಷ್ಟುಹೇಳಲಿ ಇವರ ನಿಷ್ಟ ಮಹಾತ್ಮೆಯನು ದುಷ್ಟರಿಗೆ ದೊರೆಯದಿವರ ಸೇವಾ ॥೧॥ ಹಲವು ಕ್ಷೇತ್ರಗಳ್ಯಾಕೆ ಹಲವು ತೀರ್ಥಗಳ್ಯಾಕೆ । ಫಲ ಸುಲಭದಲ್ಲೆ ಇರಲು ಬಲವು ಇದ್ದದರೊಳು ಪ್ರದಕ್ಷಿಣೆ ನುವದ ಜಲ । ತಲೆಯಲಿ ಧರಿಸಿ ನಿತ್ಯಾ । ಮಲರಹಿತನು ಆಗಿ ದಂಡ ಪ್ರಣಾಮವ ಮಾಡೆ । ಪೊಲಿವ ಕರುಣದಲಿ ವೇಗ । ಜಲಜನಾಭನು ನಾಲ್ಕುರೂಪದಿಂದಿವರಲ್ಲಿ । ಶಿಲುಕೆ ಪೂಜೆಗೊಂಬನು **ಸತತ** ಮೋಕ್ಷ ದಾತ ॥ ೨ ॥ ಹರಿದಾಸರಿದ್ದ ಸ್ಥಳವು ವರಕಾಶಿ ಮೊದಲಾದ । ಕುರುಕ್ಷೇತ್ರ ಕಿಂತಧಿಕ । ಸುರಋುಷಿ ಮುನಿಗಳು ಇಲ್ಲಿಹರು ವೈಕುಂಠ । ಸರಿಮಿಗಿಲು ಎಂದೆನಿಪದೊ ॥ ಪರಮ ಸುಜ್ಞಾನಿಗಳಿಗೀ ಫಲವು ದೊರಕುವದು । ತರತಮದಿ ಇತರ ಜನಕೆ । ಗುರು ಶ್ರೀಶ ವಿಠಲನು ಇವರ ರೂಪ ನಾಮದಲಿ । ಪರಿ ಪರಿ ವರವ ಗರೆವಾ ಪೊರೆವಾ ॥ ೩ ॥

### ೬೮ ಪದ—ರಾಗ—ಪೂರ್ವಿ—ತ್ರಿವಿಡಿತಾಳ.

ಬಾರೊ ಗುರು ರಾಘವೇಂದ್ರಾ । ಬಾರೈಯ್ಯಾ ಬಾಬಾ ॥ ಪಲ್ಲ ॥ ಹಿಂದು ಮುಂದಿಲ್ಲೆನಗೆ ನೀಗತಿ ಎಂದು ಪೊಂದಿದೆ ನಿನ್ನಪಾದವ । ಬಂಧನವ

ಬಿಡಿಸೆನ್ನ ಕರಪಿಡಿ ನಂದಕಂದ ಮುಕುಂದ ಬಂಧೋ ॥ ಅ. ಪ ॥ ಸೇವಕನೆಲೊ ನಾನು ಧಾವಿಸಿ ಬಂದೆನೆಲೊ ಸೇವಿಯು ಕೊಡು ನೀನು । ಸೇವಕನ ಸೇವೆಯನು ನೇವಿಸಿ । ಸೇವ್ಯ ಸೇವಕ ಭಾವವೀಯುತ । ಠಾವು ಗಾಣಿಸಿ ಪೊರೆಯೊ ಧರೆಯೊಳು ಪಾವನಾತ್ಮಕ ಕಾವ ಕರುಣಿ ॥ ೧ ॥ ಕರದರೆ ಬರುವಿ ಎಂದು । ನಾರುವದು ಡಂಗುರ ತ್ವರಿತದಿ ಪೊದಗುಬಂದು ॥ ಜರೆಯು ಬೇಡವೊ ಬರಿವೆ ನಿನ್ನ । ವಿರಹ ತಾಳದೆ ಮನದಿ ಕೊರಗುವೆ । ಹರಿಯು ಸ್ಮರಣೆಯು ನಿರುತದಲಿ ಎನಗ್ಗುರುಷದಲಿ ನೀ ನಿರುತ ಕೊಡುತಲಿ ॥ ೨ ॥ ನರಹರಿ ಪ್ರಿಯನೆ ಬಾರೊ । ಗುರು ಶ್ರೀಶ ವಿಠಲನ ಕರುಣ ಪಾತ್ರನೆ ಬಾರೊ ॥ ಗುರುವರನೆ ಪರಿತೋಷಿಸೆನ್ನನು ಮರೆಯುದಲೆ ತವ ಚರಣ ಕೋಟಿಯು । ಶಿರಸಿ ಚರಣಾಂಬುಂಜವ ತೋರುತ । ತ್ವರಿತದಲಿ ಓಡೋಡಿ ಬಾ ಬಾ ॥ ೩ ॥

## ಶ್ರೀ ಜನಾರ್ದನವಿಠಲ

### ೪೯ ಪದ—ರಾಗ—ಕಾಂಬೋದಿ—ಝಂಪಿತಾಳ.

ಪಾದುಕೆಪಕಂಡು ಪಾವನನಾದೆನೊ । ವೇದಾರ್ಥ ತಿಳಿದ ಗುರು ರಾಘವೇಂದ್ರರು ಮೆಟ್ಟ ॥ ಪಲ್ಲ ॥ ಮನೋಭಾವವನು ಕೊಡುವ ಘನ ಭಕುತರಿಗೆ ಇಂದು । ದನುಜದಲ್ಲಣನಂಘ್ರಿ ವನದಿ ಭಜಿಸಿ ॥ ಕನಸಿನಲಿ ಕನಕರಿನೆ । ವನಜನಾಭನ ಪದವ ವಿನಯದಿಂದಲಿ ಶೋರಿ ಮನ ಮೋದ ಬಡಿಸುವರ ॥ ೧ ॥ ಸೀತಾ ರಾಮನ ಪೂಜೆ ಆತುರದಲಿ ಮಾಡಿ । ನೀತ ಮಾರ್ಗದಿ ಜಾತರಹಿತನಾಪ । ಆತುರವ ಪರಿಹರಿಸಿ । ಶಾತಕುಂಭದಂತೆ । ಆತುಮುವ ಮಾಡುವ ಅನಿಮಿತ್ಯ ಬಂಧುವಿನ ॥ ೨ ॥ ಗುರು ಸುಧೀಂದ್ರರ ವರ ಕುಮಾರಕರಾದ । ಪರಲೋಕ ಸುಖಕೊಡುವ ಪರಮ ಕರುಣೀ ॥ ಧರೆಯೊಳಗೆ ಸರಿಗಾಣೆ ಜನಾರ್ದನ್ನ ವಿಠ್ಠಲನ್ನ । ಸ್ಥಿರವಾಗಿ ಭಜಿಸುವ ಗುರು ಶಿಖಾಮಣಿಯು ದ್ವಯ । ಪಾದುಕ ॥ ೩ ॥

### ೫೦ ಪದ—ರಾಗ—ಭೈರವಿ—ಅಟ್ಟತಾಳ

ಇಂದು ಎನ್ನನು ಬಂದು ರಕ್ಷಿಸೊ । ತಂದೆ ಗುರು ರಾಘವೇಂದ್ರನೇ । ಮುಂದಮತಿ ನಾ ಮನದಿ ಮಾಡುವ ಕುಂದುಗಳ ನೀನೆಣಿಸದೆ ॥ ಪಲ್ಲ ॥

ಭಕ್ತಿ ಕರ್ಮ ವಿರಕ್ತಿಯನು ಮಾಡಿ । ಭಕ್ತಜನ ನಿನ ಸಂಗದೊಳು ನಲಿದು । ಕ್ತಿವಂದನ ನುಡಿವು ಪರಮಾ ಸಕ್ತಿಯಿಂದಲಿ ಪಾಡುತಾ ॥ ತ್ಯಕ್ತಿಸೀ ವಿಷ ಯಾಂಬುಧಿಯನು । ಮುಕ್ತಿದಾತನ ನಾಮ ಮುಂಕೊಂಡು । ಯುಕ್ತಿ ಯಿಂದಾಚರಿಸದಲೆ ಸಲಹೋ ಶಕ್ತ ನೀನೆಂದು ನಂಬಿದೆ ॥ ೧ ॥ ವಾರ್ತೆ ನುಡಿಸರಿ ಕೀರ್ತಿ ಪುರುಷನೆ । ಆರ್ತನಾಗಿ ಆಚರಿಪ ಜಗ । ಪಾರ್ಥ ಸಖ ನಾಪಾರ ತಂತ್ರ ಬಲ್ಲ । ಭ್ರಾತೃ ಮಾತೃ ಪಿತೃ ಬಂಧುವೆ ॥ ಪೂರ್ತಿಸದೊ ಮನ ಸ್ತೋತ್ರ ಮಾಡಲು । ತೀರ್ಥ ತುಂಗತೀರ ವಾಸನೆ । ಮೂರ್ತಿ ಮಂತದಿ ನಿಂತು ಮುಖದಾ । ಮೂರ್ತಾ ಮೂರ್ತದಿ ಮುನಿರಾಯ ॥ ೨ ॥ ಕರವಪಿಡಿ ಜ್ಞಾನ ಕಾಮಧೇನವೆ। ಚರಣ ಪೊಂದಿಪೆ ಚಿಂತಾಮಣಿಯೆಂದು । ನರಮಾತ್ರದವ ಮರೆತ ಕಾಲಕು । ಪರಿಗ್ರಹವ ಮಾಡಿ ಪರಸುಖ ॥ ಪರಿ ಪಾಲಿಪ ರಾಮನಾದ ಜನಾರ್ದನ ವಿಠಲನ್ನ ಪಾದವ ॥ ನಿರುತ ಹೃದಯ ನಿಮ್ನದಲಿ ತೋರುವ । ಶರಣ ಜನ ಮನೊಹಾರನೇ ॥ ೩ ॥

## ಶ್ರೀ ಅಭಿನವ ಜನಾರ್ದನವಿಠಲ

### ೫೧ ಪದ—ರಾಗ— ಶ್ರೀರಾಗ—ಆದಿತಾಳ

ಮಂತ್ರಾಲಯ ಮಂದಿರ ಮಾಂ ಪಾಹಿ ಯತಿವರ ॥ ಪಲ್ಲ ॥ ಮಧ್ವಾಖ್ಯಮುನಿ ಸಂದ್ವಂಶೋದ್ಭವ ಅದ್ವೈತಾರಣ್ಯ ಸದ್ವೀತಿ ಹೋತ್ರ ॥೧॥ ಸುಧೀಂದ್ರ ಯತಿಕರ ಪದುಮೋದ್ಭವ । ಸುಧಿ ಗುರುರಾಘವೇಂದ್ರ ಕೋವಿದಕುಲವರ್ಯ ॥ ೨ ॥ ದಂಡಧರ ಕೋದಂಡಪಾಣಿ ಪದ । ಪುಂಡರೀಕ ಧ್ಯಾನ ಅಖಂಡ ಮತೀತ್ವಂ ॥ ೩ ॥ ಸುರಧೇನು ಕಲ್ಪತರು ವರ ಚಿಂತಾಮಣಿ । ಶರಣಾಗತ ಜನ ಪರಿಪಾಲಕತ್ವಂ ॥ ೪ ॥ ಅಭಿನವ ಜನಾರ್ದನ ವಿಠಲನ ಪದ । ಯುಗಳ ಧೇನಿಪ ಮುನಿಕುಲೋತ್ತಂಸ ॥ ೫ ॥

### ೫೨ ಪದ—ರಾಗ—ಯರಕಲ ಕಾಂಬೋದಿ—ಆದಿತಾಳ

ಬಾಗಿ ಭಜಿಸಿರೊ ರಾಘವೇಂದ್ರ ಯತಿಯಾ । ಕೊಡುವನು ಸನ್ಮತಿಯಾ ಯೋಗಿ ಕುಲವರ್ಯ ಭಾಗವತರ ಪ್ರೀಯಾ । ಸತ್ಕವಿಕುಲಗೇಯಾ ॥ಪಲ್ಲ॥

॥ ಪಲ್ಲ ॥ ಯತಿ ಸುಧೀಂದ್ರ ಗುರು ಸುತಾದ್ಭುತ ಸುಚರಿಯಾ । ಪುಶಿಯೆಲ್ಲ ಪುಖರಿಯ । ಶ್ರಿತಜನ ತತಿ ಕಾಮಿತ ತರುಸುರಧೇನು । ಚಿಂತಾಮಣಿ ತಾನು ।ಶತ ಪರ್ವತ ಪತ್ಸರ ವೃಂದಾವನದೀ । ನಲಿ ನಲಿವನು ಮುದದೀ । ಚತುರವಿಧ ಸು ಪುರುಷಾರ್ಥಗಳನೆ ಕೊಡುವ । ನಂಬಿದವರಘ ಕಡಿವ ॥೧॥ ವರಮಂತ್ರಾಲಯ ಸುರಚಿರಚಿರ ಗೃಹದಲ್ಲೀ । ವರಹಜ ತೀರದಲಿ ಮೆರೆವ ಮಂದರನ ಪೊರೆವಪಾ(ತಾಪ)ಪಕಳೆವಾ । ಮನದೊಳು ತಾ ಪೊಳೆವಾ। ಸರು ವಜ್ಞರು ಮೊದಲಾದ ಮುನಿಗಳಲ್ಲೀ । ಇಪ್ಪರು ಮುದದಲ್ಲಿ । ದುರಾಭಿಮಾನದಿ ಬಾರದವನೆ ಕೆಟ್ಟಾ ಬರಲೀವಸು-ಇಷ್ಟಾ ॥೨॥ ಮಧ್ವಮುನಿಯ ಸುಮತಾಬ್ಧಿ ಪೂರ್ಣಚಂದ್ರಾ । ಸದ್ಗುಣ ಗಣ ಸಾಂದ್ರಾ । ಸದ್ವೈಷ್ಣವ ಗುರು ಕುಮತಾದ್ರಿಗೆ ಕುಲಿಶಾ । ಕಾಷಾಯ ವಾಸಾ । ಸಿದ್ಧಾಂತ ಸುಧಿಗೆ ಪರಿಮಳಾಖ್ಯಗ್ರಂಥಾ । ಮಾಡಿದ ದಯವಂತ । ಮುದ್ದು ಅಭಿನವ ಜನಾರ್ದನ ವಿಠಲನ್ನಾ ಸದ್ಭಕ್ತವರೇಣ್ಯಾ ॥ ೩ ॥

## ೫೩ ಪದ—ರಾಗ—ಮೋಹನ—ರೂಪಕತಾಳ.

ತುಂಗಾ ತೀರದಿ ನಿಂತ ಶ್ರೀ ಯತಿವರನಾರೆ ಪೇಳಮ್ಮಯ್ಯ । ಸಂಗೀತ ಪ್ರೀಯಾ ಮಂಗಳ ಸುಗುಣ ತರಂಗ ಮುನಿಕುಲೋತ್ತುಂಗ ಕಾಣೆಮ್ಮಾ ॥ ಪಲ್ಲ ॥ ಚಲುವ ಸುಮುಖ ಫಣಿಯಲ್ಲಿ ತಿಲಕ ನಾಮಗಳು । ಪೇಳಮ್ಮಯ್ಯ । ಜಲಜಮಣಿ ಕೊರಳಲ್ಲಿ । ಶ್ರೀ । ತುಲಸಿಮಾಲೆಗಳು ಪೇಳಮ್ಮಯ್ಯಾ । ಸಲಲ್ಲಿತ ದಂಡಕಮಂಡಲ ಧರಿಸಿಹ ನಾರೆ ಪೇಳಮ್ಮಯ್ಯಾ । ಖುಲ್ಲ ಹಿರಣ್ಯಕನಲ್ಲಿ ಜನಿಸಿದಾ । ಪ್ರಲ್ಹಾದನು ತಾನಿಲ್ಲಿಹನಮ್ಮಾ ॥ ೧ ॥ ಸುಂದರ ಚರಣರ ವಿಂದ ಸುಭಕುತಿಗಳಿಂದಾ । ಪೇಳಮ್ಮಯ್ಯಾ । ವಂದಿಸಿ ಸ್ತುತಿಸಲು ಬಂದ ಸುಖಸುರ ವೃಂದಾ ಪೇಳಮ್ಮಯ್ಯಾ । ಚಂದದಲಂಕೃತ ವೃಂದ ಭೂಮಿ ಸುರರಿಂದಾ ಪೇಳಮ್ಮಯ್ಯಾ । ಹಿಂದೆ ವ್ಯಾಸಮುನಿ ಎಂದೆನಿಸಿದ । ಕರ್ಮಂದಿಗಳರಸ ( ಘವೀಂದ್ರ ಕಾಣಮ್ಮಾ ( ಯತೀಂದ್ರ ) ಕಾಣಮ್ಮಾ ) ॥ ೨ ॥ ಅಭಿನವ ಜನಾರ್ದನ ವಿಠಲನ । ಧೇನಿಸುವ ಪೇಳಮ್ಮಯ್ಯಾ । ಅಭಿವಂದಿತರಿಗೆ ಅಖಿಳಾರ್ಥವ ಸಲಿಸುವಾ ಪೇಳಮ್ಮಯ್ಯಾ ।

ನಭಮಣಿ ಯೆಂದದಿ ಇಭವದಿ ಬಲುರಾಜಿಸುವ ಪೇಳಮ್ಮಯ್ಯಾ । ಶುಭ ಗುಣ ನಿಧಿ ಶ್ರೀ ರಾಘವೇಂದ್ರ ಗುರೊ । ಅಬುಜ ಭವಾಂಡದಿ ಪ್ರಬಲ ಕಾಣೆವ್ಮಾ || ೩ ||

೫೪ ಪದ—ರಾಗ—ಧನ್ಯಾಸಿ—ಅಟ್ಟ ತಾಳ.

ಗುರುವೆ ನೀ ಕರುಣಿಸದಿರಲು ಉದ್ಧರಿಸುವ ಧೊರೆಗಳೀ ದರೆಯೊಳುಂಟೆ । ಕರುಣಾಸಾಗರ ಎನ್ನ ಕರವ ಕೈಪಿಡಿದು । ಕುರುಣಿಸೊ ಸುಧೀಯಿಂದ್ರ । ಕರಜ ರಾಘವೇಂದ್ರ || ಪಲ್ಲ || ತರುಣಿ ತರುಳರು ಈ ಶರೀರ ಬಂಧುಗಳುಪಕರಿಸಲು ದ್ಧರಿಪರಲ್ಲ||ಶರಣರಿಲ್ಲವ ಪಕ್ಕಮುರಿದುಬಿದ್ದ ಗುಬ್ಬಿಮರಿಯಂತೆ ಬಾಯಿ ಬಿಡುತಿರಲು ನೋಪ್ಪರೆ ಅಸ್ಮದ್ಗುರುವೆ || ೧ || ಕ್ಷಿತಿಯೊಳು ಭಕ್ತರ ವಾಂಛಿತವಿತ್ತು ಪೊರೆವ ಕೀರುತಿ ಕೇಳಿದತಿಶಯದೀ || ಪತಿತಪಾವನ ಇಂದ್ರ ನುತಿಸಿ ನಂಸ್ತುತಿಸಿ । ತ್ವರಿತ ಬಂದು ಶರಣಾಂಗತನಾದ ವ್ಯಾಲೆನ್ನ || ೨ || ದಿನಕರಕುಲ ಜಾತನೆನಿಸಿವ ರಾಮನಪಾದ । ವನಜಾರಾಧಕನೆ ಸಿತ್ಯಾ । ಮುನಿಕುಲೋತ್ತಮ ಸಜ್ಜನ ಶಿಖಾಮಣಿ ಗುಣಗಣ ಅ । ಭಿವ ಜನಾರ್ದನ ವಿಠಲನ ದೂತಾ || ೩ ||

೫೫ ಪದ—ರಾಗ—ಅಹರಿ—ಏಕತಾಳ.

ಪೊರಿಯ ಬೇಕೆನ್ನ ರಾಘವೇಂದ್ರ ಗುರುವೆ ಪಾವನ್ನ । ಶರಣನೆಂದು ನಿನ್ನ ಶರಣು ಪೊಕ್ಕೆನಾ ಕರುಣಿ || ಪಲ್ಲ || ಸದಮಲ ಕುಲಾಗ್ರಣಿ ಸುಧಿಯೀಂದ್ರಯತಿ ಪಾಣಿ । ಪದುಮದಿಂದ ಜನಿಸಿದ ದಿವ್ಯ ಘನಮೌನಿ । ಹೃದಯಾಬ್ಜದಲ್ಲಿ ಹರಿಯ ಪಾದಾ । ಪದುಮಾದರಲಿ ಬಲುಪರಿನವ । ವಿಧ ಭಕುತಿಯಲ್ಲಿ ಪೂಜಿಸುವಾಸುಗುಣ । ವೊದಗಿ ನಿನ್ನ ಧ್ಯಾನ ಸ್ನೇಹದ ಬಗಿಬಲ್ಲಿ || ೧ || ಜನನಿಜನಕರು ತಮ್ಮ ತನುಜಾನು ತಿಳಿಯದೆ ಅನುಚಿತ ಕಾರ್ಯವಾ । ಅನುಸರಿಸಲು ಅವನ । ಕನುಕಾರ ಬಿಟ್ಟು । ಅವನ ನಡತಿ ಮನಸಿನೊಳಿಟ್ಟು ಪೋಷಿಸದಲೆ ಮುನಿದಿನ್ನು ಸಿಟ್ಟು । ಮಾಡುವರೇನೂ । ಅನಘತ್ವದ್ಧಾನನ । ಘನದಯಾವಿಟ್ಟೊ || ೨ || ಹಲವು ಮಾತೇನೂ

ಶ್ರೀ ನಿಲಯಾನನುಗ್ರಹ। ಬಲದಿ ವ್ಯಾಪಾರವಾ ಅಭಿನವ ಜನಾರ್ದನ ವಿ। ಠ್ಠಲನಿಗೆ ಭಕ್ತ ಭಕುತಿ ಜ್ಞಾನ ವಿರಕುತಿ ನಿತ್ತು। ಸಲಹ ಬೇಕಯ್ಯ ಕರುಣಿಸಿ ಆರ್ತ ಜನರನು ॥ ೩ ॥

## ೫೬ ಪದ—ರಾಗ—ಸಾವೇರಿ—ಝಂಪೆ ತಾಳ.

ಗುರು ರಾಘವೇಂದ್ರರಾಯರಾ। ಗುರು ರಾಘವೇಂದ್ರರಚ್ಚರಣ ಭಜಿಸುವರ ಭವ ಶರಧಿ ದಾಟಿಸಿ ಇಹಪರ ಸೌಖ್ಯ ಕೊಡುವೀ ಗುರು ರಾಘವೇಂದ್ರ ರಾಯಾ ॥ ಪಲ್ಲ ॥ ಎಲ್ಲಿ ಕಾಶೀ ಪ್ರಯಾಗ ಎಲ್ಲಿ ಗಯ ಸೇತು ಮತ್ತೆಲ್ಲಿ ವೆಂಕಟಗಿರಿ ಕಂಚಿಯಿಂದಾ ॥ ಯಲ್ಲೆಲ್ಲಿ ದೇಶದವರಲ್ಲೆಲ್ಲ ಜನರು ಬಂದಿಲ್ಲೆ ಸೇವಿಸಲು ಫಲ ನಿಲ್ಲದಲೆ ಕೊಡುವಿ ರಾಘವೇಂದ್ರಾ ॥ ೧ ॥ ಆವ ದೇಶದಲಿ ಆವಾಸ ಮಾಡಿ ವೃಂದಾವನದಿ ಮೆರವೆ ಭಕ್ತಾವಳಿಗಳಾ ॥ ಆವಾವ ಯೊಗ್ಯತೆಯು ಆವರ್ಗೆ ಇಹ್ಯದು ತಿಳಿ। ದಾವಾವು ಗತಿಗಳನು ಕೊಡುವೆ ॥ ೨ ॥ ದಂಡ ಕಾಮಂಡುಲವ ಕೊಂಡು ಪಂಡಿತರೆಂಬ। ಪುಂಡರೀಕುದಯ ಮಾರ್ತಂಡನೆನಿಸ। ಚಂಡ ದುರ್ವಾದಿ ಮತ ಖಂಡ್ರಿಸಿ ಮೆರೆದು ಭೂ। ಮಂಡಲದಿ ರಘು ಪತಿಯ ಕಂಡು ಭಜಿಸುವ ನಮ್ಮ ಗುರು ರಾಘವೇಂದ್ರ ॥ ೩ ॥ ಉರ್ಬಿಯೊಳು ಬಂದಿಲ್ಲಿ ಸರ್ಬ ಜನರುಗಳು ಫಲಲಭ್ಯವಿಲ್ಲದೆ ಪೋಪ ನೊಬ್ಬನಿಲ್ಲಾ। ಹಬ್ಬಿ ಸದ್ಭಕ್ತಿಯಿಂದುಬ್ಬಿ ಸೇವಿಸಲು ಭವ ದುಬ್ಬಳವ ದಾಟಿಸಿ ಸುಖಾಬ್ಧಿಯೊಳಗಿಡುವೀ ॥ ೪ ॥ ವನಿತೆ ಧನ ಮನಿತನಯರನು ಬಯಸಿ ಭಜಿಸುವ। ಜನರಿಗಾಕ್ಷಣದಿ ಸತ್ಫಲ ಕೊಡುವೆ। ಘನ ಅಭಿನವ ಜನಾರ್ದನ ವಿಠ್ಠಲ ಯದುಪತಿಯನೆ। ನನೆನುಪಾಸನಸ ವಾಳ್ಪನೆ ನಮ್ಮ ಗುರು ರಾಘವೇಂದ್ರಾ ॥ ೫ ॥

## ೫೭ ಪದ—ರಾಗ—ಪೂರ್ವಿ—ಏಕತಾಳ.

ಕಾಯೊ ಗುರು ರಾಘವೇಂದ್ರಾ ॥ ಪಲ್ಲ ॥ ರಾಘವೇಂದ್ರ ಗುರುವೇ ಗತಿಯೋ ಭವ। ರೋಗ ಬ್ಯಾಗ ಕಳದೀಗ ಯೋಗಿವರ ಕಾಯೋ ॥ ೧ ॥ ನಿನ್ನ ದಾಸಾನಾ ನನ್ನ್ಯನಲ್ಲ। ಈ ಘನ್ನ ಬನ್ನ ಬಿಡಿ। ಶ್ಯನ್ನನು ಮನ್ನಿಸಿ ॥ ೨ ॥ ಅಭಿನವ ಜನಾರ್ದನ ವಿಠಲನ ಪ್ರಿಯಾ। ಶುಭಕರತರಭಯದ ಪ್ರಬಲ ಅಬಲನಾ ॥ ೩ ॥

## ೫೮ ಪದ—ರಾಗ—ಸಾವೇರಿ—ಆದಿತಾಳ.

ಬಾಗ್ಯ ನಾಗಿ ಬಾರೈಯ್ಯಾ ರಾಘವೇಂದ್ರ ಗುರುವೆ । ಬಾಗಿ ಭಕುತಿಲಿ ಚನ್ನಾಗಿ ತುತಿಪೆ ನಿನ್ನ। ಭಾಗವತಾಗ್ರಣಿ ಭಾಗವತರ ಪ್ರೀಯಯೋಗಿ ಕುಲವರ್ಯ ಯೋಗೇಂದ್ರ ವಿನುತ ॥ ಪಲ್ಲ ॥ ಗಿರಿಯು ವೆಂಕಟ ನರಹರಿ ರಾಮ ಕೃಷ್ಣ ವ್ಯಾಸ । ಸಿರಿ ನಾರಾಯಣ ತನ್ನ ವರಮೂರ್ತಿಗಳಿಂದಾ। ಸರಸೀಜ ಭವವಾಯು ಸರಸ್ವತಿ ಭಾರತಿ ತ್ರಿ। ಪುರಹರ ಶೇಷ ವಿಪ ಸುರವಾದ್ಯರ ಕೈಯಿಂದ। ಥರಥರದಲಿ ಪರಿಪರಿ ಸೇವೆಯ ವಿ। ಸ್ತರವಾಗಿ ಕೊಳ್ಳುತ । ಮೆರಗುತ ನಿಲಿಸಿಹ ಸ್ಥಿರವಾಗಿ ನಿಂದು ಆಶ್ಚರ್ಯವಾ ಧರಿಗೆ ತೋರ್ಪದಕ ಮೆರವುತಲಿಹ ಹರೀ ॥೧॥ ರಥರೂಢನಾಗಿ ಬರುತಲಿರೆ ನಿನ್ನ ಕ್ಷಿತಿಸುರರೆಲ್ಲಾ ಭಾಗವತ ಪಂಚಮವೇದ ॥ ಭಾರತ ಪುರಾಣ ಮತ್ತೆ ಶ್ರುತಿಗಳಿಂದಲಿ ಬಲುತುತಿಸುತಲಿನ್ನು । ಅತಿ ಹರುಷದಿ ಬಾರೆ ಯತಿಗಳಗತಿ ಸಂಗತಿಯಿಂದಲಿ ನಲಿವುತ ಬಲುಪರಿ ಮೆರವುತ ಸ। ದ್ಗತಿಯ ಕೊಡಲು ಅಚ್ಚುತ ಸುಚರಿತ ಆರತಜನ ಬಂಧು ॥೨॥ ಸೂರಿ ಜನರುಗಳ ವಾರ ಸಂದೋಹದಿಬರೆ ಭಕುತರು ಗಂಭೀರಸ್ವರದಿ ಪಾಡೇ । ಭಾರಿ ಭಾರಿಗೆ ಮಂಗಳಾರುತಿ ಎತ್ತಿ ಜನರು ಹಾರ ಪರಿಮಳ ಶರೀರಕ ಗಂಧ ಸ್ಪರ್ಶಿಸೀ। ಭೂರಿ ಜನರು ಕೈ । ವಾರಿಸುತಿರಲು ಭೇರಿ ಕಹಳಿ ಭೊಂಭೇರಿಡುತಿರೆ। ಮುರವೈರಿ ಅಭಿನವ ಜನಾರ್ದನ ವಿಠ್ಠಲ ಸೇರಿ ಸುಖಿಪ ಗುರು ಸಾರುವ ಭಾವಾ ॥ ೩ ॥

## ೫೯ ಪದ—ರಾಗ—ಸುರಟ ಆದಿತಾಳ

ಬಂದದ್ದೆಲ್ಲಾ ಬರಲಿ ರಾಘವೇಂದ್ರರ ದಯ ನಮಗಿರಲಿ। ಹಿಂದೆ ಬಹು ಜನುಮದಿಂದ ಮಾಡಿದ ಘ। ಸಂದಣಿ ಕಳೆವ ಗಿದೊಂದರಿದೆನ್ನೈ ॥ಪ॥ ದಾಶರಥೆ ವೇದವ್ಯಾಸ ನರಕೇಸರಿ ಶ್ರೀಯಾದವೇಶಾ । ಈ ಸುಮೂರ್ತಿಗಳುಪಾಸನಿಯ। ಲೇಸಾಗಿ ಮಾಳ್ಪ ವಿಶೇಷಾ। ದಾಸ ಜನರ ಅಭಿಲಾಷಿ ಪೂರ್ತಿಸುವ ಶ್ರೀ ಸುಧೀಂದ್ರಜ ಯತೀಶನ ದಯವಿರೆ ॥ ೧ ॥ ಧರಣಿಯ ಕಳಕೊಂಡವರು ಉಡಲರಿವಿ ಅನ್ನಯಿಲ್ಲದವರೂ। ತರುಳ ಸಂಪದ ರಹಿತರೂ ಮಹ ದುರುತರ ಜ್ಞಾನ ಭರಿತರೂ । ತೆರಳಿ ಬಂದು ಸಂದರುಶನ

ಮಾಡಲು। ಕರದೀ ಪ್ಸೀತ ಪೊರೆವರ ದಯವಿರುತಿರೆ ॥೨॥ ವಾತ ಪಿತ್ತ ಖಪ ಶೀತಾ ಸನ್ನಿಪಾತಕ ಜ್ವರ ಪ್ರಖ್ಯಾತ॥ ಭೂತ ಪ್ರೇತ ಭಯ ವಾತ ಕಳೆವಾ ತುರರಿಗೆ ಫಲದಾತ। ನಾಥ ಅಭಿನವ ಜನಾರ್ದನ ವಿಠಲ ದೂತ ನಂವ ಯತೀಶನ ದಯವಿರೆ ॥ ೩ ॥

## ೬೦ ಪದ—ರಾಗ—ಪೂರ್ವಿ—ತ್ರಿವಿಡಿ.

ನೋಡಿದೆನು ಗುರು ರಾಘವೇಂದ್ರರ। ನೋಡಿದೆನು ಸುಖ ಸಾಂದ್ರರ ನೋಡಿದೆನು ಧರುಣೀ ಸುರೇಂದ್ರರ। ನೋಡಿದೆನು ಸುಯತೀಂದ್ರರ ॥ಪಲ್ಲ॥ ಊರ್ವಿಯೊಳಗೀ ಸ್ಥಳಬಲುತ್ತುಮ। ಪೂರ್ವದಲಿ ಪ್ರಲ್ಹಾದನು। ಗರ್ವ ಮುಮುಕರಗಳ ತ್ಯೆಜಿಸಿ ಅಪೂರ್ವ ಯಾಗವ ಮಾಡಿದ॥ ಸರ್ವಜ್ಞರ ಮತ ದಲ್ಲಿ ಪ್ರವರ್ತಕ ವೋರ್ವ ಈ ಮಹ ಮುನಿವರಾ। ಪೂರ್ವೋತ್ತರವನು ತಿಳಿದು ನಿಲಿಸಿದ। (ಊ) ದೂರ್ವೊಳಗೆ ನಾಕೇಳಿವೆ ॥೧॥ ಧರಿಯೊಳಗೆ ಮಂ ತ್ರಾಲಯವೆನಿಸಿ। ಕರಸಿಕೊಂಬದು ಪ್ರತಿದಿನ। ವರಹತನಯಳ ತೀರ ಯಾದವ। ಗಿರಿಗೆ ಉತ್ತರ ಭಾಗದೀ। ಇರುತಿಹದು ಸುಉಪೇಂದ್ರರ। ವರ ಕುವರವಾದಿಂದ್ರ್ಯೆತಿ ರಾಯರು। ಇವರ ಅನುಸರಿಸಿದ್ದದನು। ತ್ವರಿತವಲಿ ನಾ ಕೇಳಿದೆ ॥ ೨ ॥ ಈ ಮಹಾ ಮಹಿಮೆಯ ತಿಳಿದು ಸ್ವ। ಗ್ರಾಮದಿಂದ ಲಿ ತೆರುಳುತಾ। ಯಾಮಯಾಮಕೆ ರಾಘವೇಂದ್ರಃ। ಸ್ವಾಮಿ ಗೋವಿಂದೆ! ನುತಲಿ॥ ನಾಮರಿಯದಲೆ ಕ್ಷಣಕ್ಷಣಕೆ ಬಲು। ಪ್ರೇಮದಲಿ ನಲಿನಲಿಯುತಾ ಈ ಮುನಿಪ ಶೋಭಿಸುತಲಿಪ್ಪ। ಸುಧಾಮದೂರದಿ ನೋಡಿದೆ ॥೩॥ ಅಲ್ಲಿ ಸಾಷ್ಟಾಂಗವನೆ ಮಾಡುತ। ಮೆಲ್ಲ ಮೆಲ್ಲನೆ ಬರುತಲಿ। ನಿಲ್ಲದಲೆ ಪ್ರಾಕಾರ ದೊಳು। ಬಲದಲ್ಲಿ ಪ್ರದಕ್ಷಣಿ ಮಾಡುತ॥ ಬಲ್ಲಿದಾ ಯೋಗೀಂದ್ರ ಮುನಿ। ಕರಪಲ್ಲವದಿ ಪ್ರತಿಷ್ಠಿತ। ಚಲ್ವ ಹನುಮನ ಗುರುಗಳನು। ಮನದಲ್ಲಿ ವಂದನೆ ಮಾಡುತಾ ॥ ೪ ॥ ಪ್ರತಿಪ್ರತಿಯ ವತ್ಸರಕೆ ಶ್ರಾವಣ। ದ್ವಿತಿ ಯ ಕೃಷ್ಣ ಸುಪಕ್ಷದೀ। ಕ್ಷಿತಿಯ ವ್ಯಾಲ್ದಿಗ್ದಂಥ ವಿದ್ವಾಂ। ತತುಳ ಕೀರ್ತಿ ಯ ಕೇಳುತಾ॥ ಅತಿಶಯದಿ ಆಶೇತು ಹಿಮಪ [ತ] ರ್ವತವ ಮಧ್ಯಸ್ಥಿತ ಜನಾ। ತತಿಗಳತಿಶಯದಿಂದ ಬರು। ವಾದ್ಭುತುವ ಕಂಣಿಲಿ ನೋಡಿದೇ

॥ ೫ ॥ ಹಿಂಗದಲೆ ಊರೊಳಗಿಳಿದು ಸತ್ಸಂ। ಗದಲಿ ಸುಸ್ನಾನವ। ಅಂಗ ಪರಿಶುದ್ಧಾರ್ಥ ಪೋಗಿ। ತುಂಗಭದ್ರಾ ನದಿಯೊಳು ॥ ತುಂಗ ಸಂಕಲ್ಪ ವನು ಪಠಿಸುತ। ಗಂಗೆ ಮೊದಲು ಸುಸರಿಸಕೆ। ಮಂಗಳನು ಸಂಧಾನದಲಿ ಅ। ರ್ಘ್ಯಂಗಳನು ನಾ ನೀಡಿದೆ॥ ॥ ೬ ॥ ಕೋಲದಾಂಷ್ಟ್ರದಿ ಸಂಭವಿಸಿ ಶ್ರೀ ಶೈಲ। ಗಾಮಿನಿಯೆನಿಸಿದ। ಸುಶೀಲೆಯುಂನ್ನನುಶುದ್ಧನೆನಿಸೀ। ಪಾ ಲಿಸನುತಲಿ ತುತಿಸಿದೇ ॥ ವ್ಯಾಲೆಸ್ನಾನವ ಮಾಡಿ ಪುಂಡ್ರವ। ಲೋಲ ಮನದಲಿ ಧರಿಸುತ। ಆಲಸವ ಮಾಡದಲೆ ಜಪವಾ। ಕಾಲದಲಿ ನಾವಮಾ ಡಿದೇ ॥ ೭ ॥ ಮುಕ್ತರೊಡಿಯುನ ಪೂಜಿಸುತಲಾಸ। ಕ್ತಿಲಪಣಾಚಾರ್ಯ ರ। ಉಕ್ತಸ್ತೋತ್ರ ಪದನದಿ ಪಠಿಸುತ। ಯುಕ್ತಿಯಿಂದಲಿ ಪೋಗುತ ॥ ವ್ಯಕ್ತ ಮಹಿಮರ ನೋಡಿ ನಾಬಲು। ರಿಕ್ತ ದಯಮಾಡೆನುತಲಿ। ಶಕ್ತಿ ಇದ್ದದರೊಳಗೆ ನಾದೃಢ। ಭಕ್ತಿಯಲಿ ಕೊಂಡಾಬಿದೇ ॥ ೮ ॥ ಪೋಗಿ ಸಾಷ್ಟಾಂಗವನು ಮಾಡುತ। ಬಾಗಿ ವಿನಯದಿ ನೋಡುತಾ। ಯೋಗಿ ವರರ ಪ್ರದಕ್ಷಿಣೆಯ। ಅನುರಾಗದಿಂದಲಿ ಮಾಡುತಾ॥ ಕೈಗಳಿಂದಲಿ ಫಲವ ಮುಂದಿ। ಟ್ಟಾಗ ವರಪಂಚಾಮೃತಾ। ಭಾಗಿರಥಿಯಲಿ ಸ್ನಾನ ಮಾಳ್ಪ ದು। ಯೋಗನಯನದಿ ನೋಡಿದೇ ॥ ೯ ॥ ಅಂಗದಲಿ ದ್ವಾದಶ ವಿಧದ ನಾಮಂಗಳು ಮುದ್ರಿಗಳನೂ। ಶ್ರಿಂಗರಿಸಿ ಗಂಧಾಕ್ಷತೆಯು। ಪುಷ್ಪಂಗಳಾ ಸರವಲಿಯಲೂ (ಒಪ್ಪಲು) ॥ ಮಂಗಳದ ನೈವೇದ್ಯ ಕೊಡಲು। ಜನಂಗಳಾ ಸುಪ್ರಸಾದವ ॥ ಹಿಂಗದಲೆ । ಸ್ವೀಕರಿಸಿದಾವ್ಯಾಲ್ಮಂಗಳಾರ್ತಿಯ ನೋಡಿದೆ ॥ ೧೦ ॥ ಮೊದಲು .ಹಿರಣ್ಯಕಶ್ಯಪುವಿನರಸಿಯ । ಉದರ ದಲಿ ಸಂಭವಿಸಿದ। ಅದರ ತರುವಾಯದಲಿ ಬಾಲ್ಹೀಕ। ಅಧಿಪನೆಂತೆಂ ದೆನಿಸಿದ॥ ಮುದದಿ ಸುಖಕರಚಂದ್ರಿಕಾ ವಿರಚಿ। ಸಿದ ವ್ಯಾಸನೀತನೆ ವಿಜ ಯೀಾಂದ್ರಜ। ಸುಧೀಂದ್ರಕರ ಕಮಲದಲಿ ಸಂಭವಿ। ಸಿದ ಗುರುಗಳನು ನೋಡಿದೇ ॥ ೧೧ ॥ ಅಂದದೀ ಪ್ರಕಾರವೆ ಸುರ। ಮಂದಿರವು ಗುರುಗಳ ಪದಾ। ದ್ವಂದ ಮೂಲವು ಬಾಹುಶಾಖಿಯು। ಚಂದದ್ವಿಜರಿಂದೊಪ್ಪುವ॥ ನಂದ ಕಾಮಿತತರುವು ವದನಜ। ಮಂದಹಾಸವೆ ಕುಸುಮವು। ಸುಂದರಾ ಪರಿಮಳ ಫಲಗಳ। ಇಂದು ಕೊಡುವದು ನೋಡಿದೆ ॥೧೨॥ ಕಾಮಿಸುವರಿಗೆ

ಕಾಮಧೇನು ಮಾಹ। ಮಹಿಮೆ ಗಳನನುದಿನಾ। ಪ್ರೇಮದಲಿ ಚಿಂತಿಸುವರಿಗೆ ಚಿಂತಾಮಣಿ ಯೆಂದೆನಿಸುವಾ॥ ಭೂಮಿಯೊಳಗುಳ್ಳಖಿಳ ಜನರು। ಈ ಮಹಾಸ್ಥಳವೆನುತ ನಿ। ಶ್ರೀಮ ತನದಲಿ ಮದುವೆ ಮುಂಜಿ। ನ ಭೋಜನಾಸಗಳಲ್ಲಿ ಮಾಳ್ಪರೂ ॥೧೩॥ * ಮಧ್ವಮುನಿ ಕೃತಗಂಥ ವೆಂಬ ಪ। ಯೋಬ್ಧಿ ಪಾರಂಗತ ವಿದು। ಕೃದ್ಧ ಕಾಮನ ಗೆದ್ದ ಜ್ಞಾನಿ। ಶುದ್ಧ ನೇತ್ರಿ ಶ್ರಿನೇತ್ರಿ ಯಾ। ಇದ್ಧರಿಯ ಸಜ್ಜನರು। ಭರದಲಿ। ಎದ್ದು ವಂದನೆ ಮಾಳ್ಪರು। ಶುದ್ಧ ವಾಕ್ ಸುರಸರಿತು ಭಕ್ತ। ರ ವುದ್ಧರಿಸಲೇಂದಾಡಿದೇ ॥ ೧೪ ॥ ಮರಳೆ ಪೂರ್ವೋತ್ತರಮಿಮಾಂಸಾ। ಪರಿಮಿತದಿ ಬಲ್ಲವರ್ ಮ ಹಾ। ದರದಿ ಸೇವಿಪ ಹಂಸರಿಂದೊಡ। ಸುರನಿಕರ ಸಂಶೇವಿತಾ॥ ಹರಿ ಪದಾಂಬುಜ ಮಗ್ನವೆನಿಪುದು. ಗುರುವರರ ವಾಕ್ ಸುಮನಸಾ। ಸರಿತು ಭಕ್ತರ ಪೊರೆಯೆಲೆನುತಲಿ। ಗುರುಗಳನು ಕೊಂಡಾಡಿದೇ ॥ ೧೫ ॥ ಜೀವ ಈಶಗೆ ಭೇದ ತರತಮ। ಭಾವ ಜಗತು ಸುಸತ್ಯವು। ಈ ವಿಧದ ಗುಣ ಪೂರ್ತಿ ದುಮಾತ। ಜೀವರೆಂಬಜನುಂಗುವಾ॥ ಕೇವಲತಿಶಯ ಯುಕ್ತಿ ನಕ್ರಾವಳಿಹ್ಯವಿವರವಾ। ದೇವ ತಟನಿಯು ಪಾವನವ ಮಾಡಿ ತಾವೊ ಲಿಯಲೆಂದಾಡಿದೆ ॥ ೧೬ ॥

ಶ್ರೀಮದಾಚಾರ್ಯರೇ ಮೊದಲಾದಾ। ಮುನಿಗಳೆ ಹರಿಗುಣಾ। ನೇಮ ದಲಿ ಹೇಳುತಲಿ ಕೇಳುತ। ಧಾಮದೊಳು ತುಂಬೀಹರೂ ॥ ರಾಮ ವೇದ ವ್ಯಾಸ ಕೃಷ್ಣನ। ತಾಮರಸಪದ ಭಜಿಸುವಾ। ಸ್ವಾಮಿಗಳ ಮಹಿಮೆಯನೆ ತಿಳಿದೂ। ಪ್ರೇಮದಲ್ಲಿ ಕೊಂಡಾಡಿವೇ ॥ ೧೭ ॥ ಎಲ್ಲಿ ನೋಡಿದಡಲ್ಲೆ ಪಾಠ ವು। ಯೆಲ್ಲಿನೋಡೆ ಪುರಾಣವೊ। ಯೆಲ್ಲಿ ನೋಡಲು ಸ್ತೋತ್ರ ಜಪಗಳು। ಯೆಲ್ಲಿ ನೋಡಲು ಮಾಳ್ಪಪರು॥ ಬಲ್ಲಿದರು ಪ್ರಸಂಗ ಸಂಗತಿ। ಯೆಲ್ಲಿ ನೋಡಲು ನಲಿವರೂ। ಯೆಲ್ಲ ಕಡಿಯಲಿ ಸ್ತೋತ್ರ ಮಾಳ್ಪರು। ನಿಲ್ಲದಲೆ ನಾನೋಡಿದೇ ॥ ೧೮ ॥ ಗಂಡು ಆರುತಿ ಶಿರದಲ್ಲಿಟ್ಟು। ಕೊಂಡು ತಿರ ಗುವ ಜನಗಳಾ। ದಿಂಡು ಉರಳಿಸಿ ಉರುಳುವರು ಭೂ। ಮಂಡಲದಿ

* ನುಡಿ ೧೪-೧೫ ೧೬ ಶ್ರೀ ಗುರು ಸ್ತೋತ್ರದ ಶ್ಲೋಕ ೧-೨ ರ ಅರ್ಥವೇ ಸಂಪೂರ್ಣವಿದೆ. ಸುಜ್ಞಾನಿಗಳ ಕವಿತಾ ಲಕ್ಷಣ.

ನಮಸ್ಕಾರವೂ ॥ ಮಂಡೆ ಬಾಗೀ ಸುಜನರೆಲ್ಲಾ । ಹಿಂಡು ಸ್ತ್ರೀ ಪುರಷರು
ಗಳು । ಥಂಡ ಥಂಡದಿ ಮಾಳ್ಪ ಸೇವಿಯಾ । ಕಂಡು ನಾ ಕೊಂಡಾಡಿದೇ ॥
॥ ೧೯ ॥ ಈ ಪರಿಯ ಸಂಭ್ರಮವ ನೋಡುತ । ಶ್ರೀ ಪದಾಬ್ಜದ ತೀರ
ಥಾ । ಪಾಪ ಸಂಹರವೆನುತ ಕೊಂಡು । ಸಮೀಪವಾದೇಂದ್ರತಿಗಳಾ ॥
ಖ್ಯಾಪಿ ಖ್ಯಾಪಿಗೆ ನಮಿಸಿ ನಾಬಲು । ಧೂಪದೀಪ ನೈವೇದ್ಯವ । ಆ ಫಲವ
ಮುಂದಿಟ್ಟು ನಮಿಸೀ ಬ । ಹೂಪರಿಯು ಕೊಂಡಾಡಿದೇ ॥ ॥ ೨೦ ॥
ಹಾಸು ಬಂಡಿಯಮೇಲೆ ಕುಳಿತಿಹ । ಭೂಸುರರ ಸಮುದಾಯವು । ಯೇಸು
ಪರಿಪರಿ ಭಕ್ಷ ಪರಮಾನ್ನಾಸು ಶಾಖಗಳತಿಶಯಾ ॥ ಸೂಸಲಂನ್ನವುಘೃ
ತದಿ ಪಕ್ವವಿ । ಶೇಷಬಗಿಯ ಪದಾರ್ಥವೂ । ಈ ಸುಜನರೊಡಗೂಡಿ ವುಂಡ।
ಅಶೇಷ ಜನರ ನಾನೋಡಿದೇ ॥ ॥ ೨೧ ॥ ಮೇಲೆ ಸಂಧ್ಯಾವಂದನಿಯು
ನಿಶಿ । ಕಾಲನದಿಯೊಳು ಮಾಡುತಾ ಸು । ಶೀಲ ಗುರುಸನ್ನಿಧಿಲಿ ಗೀತವ।
ಕೇಳುತಾ ನಮಸ್ಕರಿಸುತಾ ॥ ಸಾಲು ದೀಪಗಳ ಹಚ್ಚಿ ಕರದಲಿ। ತಾಳ
ಝಾಂಗಟೆ ವಾದ್ಯದಿ । ಮಾಲಿಕಿಯು ಮಂಗಳಾರ್ತಿಗಳು । ಆ ವ್ಯಾಳಿಯೆಲಿ
ನಾನೋಡಿದೇ ॥ ೨೨ ॥ ಇಂತು ಪರಿಯಲಿ ತಂತುಗಳ ಆ । ದ್ಯಂತ ನೋ
ಡುತ ಎದುರಿಲೀ । ನಿಂತು ಆರುತಿ ಬೆಳಗಿತುತಿಸುತ । ಮಂತ್ರ ಅಕ್ಷತಿಕೊ
ಳುತಲೀ॥ ಸಂತ ಗುರುವಾದೇಂದ್ರ ರಾಯರ । ನಂತರದಿ ಸೇವಿಸುತಲೀ ।
ಅಂತುಇನ ಉದಯಾಸ್ತಮಯ ಪರಿ । ಯಂತರದಿ ನಾನೋಡಿದೇ ॥ ೨೩ ॥
ಮೂರನೇ ದಿನ ಚಾರುಮಂಗಳ । ತೇರಿನೋತ್ಸಹ ನೋಡಲು । ಶ್ರೀರಮಣ
ವೆಂಕಟನೇ ಇಲ್ಲಿ ವಿ । ಹಾರ ಮಾಳ್ಪನೊ ಯೆನಿಪದೊ ॥ (ಮಾರು) ಮಾ
ರೋ ಅಂಗಡಿಸಾಲು ಗಿಡದೊಳಾ । ಪಾರಜನ ಫಲಸಹಿತದೀ । ಧೀರ ಶ್ರೀ
ಗುರುವರ್ಯರಾ ಪ್ರಾಕಾರದೊಳುನಾ ನೋಡಿದೇ॥ ॥ ೨೪ ॥ ಯತಿಶಿರೋ
ಮಣಿ ರಥವ । ನೇರಿಸುಪಥದಿ ಬರುವಾ ಕಾಲದೀ । ಕ್ಷಿತಿ ಸುರರು ಶ್ರೀ
ಭಾಗವತ ಭಾ । ರತ ಪುರಾಣ ರಹಸ್ಯವಾ ॥ ಅತಿ ಹರುಷದಲಿ ಉಪನಿಷ
ತದಿ ಗುರು । ಸ್ತುತಿಯ ಮಾಡುವ ಸುಜನರಾ । ತತಿಗಳತಿಶಯದಿಂದ ।
ತುತಿಪಾದ್ಭುತವ · ಕಂಣಿಲಿ ನೋಡಿದೇ ॥ ೨೫ ॥ ತಾಳ ತಂಬೂರಿಗಳು
ದಮ್ಮಡಿ । ಮ್ಯೇಳದಲಿ ಹರಿದಾಸರೂ । ಮೇಲು ಸ್ವರದಲಿ ಗಾನಮಾಡುತ

ಬಹಾಳ ಕುಣಿಕುಣಿದಾಡುತಾ || ವಾಲಗವ ಮಾಡುವರು ಭೇರಿ | ಕಾಳಿ ತಮ್ಮಟೆ ಬಜಂತ್ರಿಯೂ | ವ್ಯಾಲೆ ಹಗಲು ಸುದೀಪಗಳು ಆ | ವೇಳೆ ಯಲಿ ನಾನೋಡಿದೇ || ೨೬ || ತೇರಿನೊಳು ಶ್ರಿಂಗಾರ ಪರಿಪರಿ | ಹಾರ ಪರಿಮಳಪಾರವೂ | ನಾರಿ ಕೇಳ ಕದಳಿಫಲ ಖ | ರ್ಜೂರಗಳನು ಸಮ ರ್ಪಿಸೀ || ಭಾರಿ ಭಾರಿಗೆ ಕಾಣಿಕೆಗಳಿಟ್ಟಾರುತಿಗಳನು ಬೆಳಗುವಾ] ಭೂರಿ ಜನರನು ಕಂಡು ಹರುಷಾ ಪಾರದಲಿ ಕೊಂಡಾಡಿದೇ || ೨೭ || ಬಂದು ವೃಂದಾವನ ಪ್ರೇವೇಶಿಸೆ | ನಿಂದು ವ್ಯಾಲೆ ಯತೀಂದ್ರನೂ | ಮಂದಿಗಳು ಹೋಯೆಂದು ಚಪ್ಪಳಿ | ಇಂದ ಗೋವಿಂದೆನುತಲೀ || ಅಂದದಲಿ ಆರುತಿ ಯನೆತ್ತುವ | ಚಂದವನು ಯೇನೆಂಬೆನೋ| ಮುಂದಮತಿ ವರಣಿಸಲು ಅಳವ ಲ್ಲೆಂದು ವಂದನೆ ಮಾಡಿದೇ || ೨೮ || ಎಷ್ಟು ಪೇಳಲಿ ಇವರ ಮಹಿಮೆಯು] ಹುಟ್ಟ ಬಂಜೆಗೆ ಮಕ್ಕಳೂ | ಕೊಟ್ಟು ಸಲಹುವ ಕುಷ್ಟರೋಗ| ವಿಶಿಷ್ಟ ನಾಶಮಾಡುವಾ || ಕಷ್ಟಗಳ ಪರಿಹರಿಶಿ ಬೇಡಿದ | ಇಷ್ಟಕಾಮ್ಯವ ಸಲಿಸು ವಾ | ಸೃಷ್ಟಿಯೊಳಗೀಚರಿಯ ಬಲು | ಊತ್ಕೃಷ್ಟವನು ಕೊಂಡಾಡಿದೇ || ೨೯ || ಕುರುಡ ಕುಂಟರು ಕಿವುಡ ಮೂಕರು | ಪರಿಪರಿಯ ಗ್ರಹ ಪೀಡಿತಾ | ನರರು ಬಂದು ಸೇವಿಸಲು ಅವು | ಪರಿಹರಿಸಿ ಫಲವೀವರೂ || ತ್ವರಿತದಲಿ ಬಹುಪರಿಯು ಸೇವಿಸಿ | ಮರೆಯುದಲೆ ಇಹಪರ ಸುಖ | ಕರುಣಿಸೆಮ್ಮನು ಪೊರಿಯುಲೆನುತಲಿ | ಗುರುಗಳನು ಕೊಂಡಾ ಡಿದೇ || ೩೦ || ಜನ್ಮ ಜನ್ಮಾಂತರದಿ ಮಾಡಿದ| ಪುಣ್ಯ ಬಂದೊದ ಗಿವರನಾ | ಕಂಣಿನಿಂದಲಿ ನೋಡಿ ನಾಬಲು ಧನ್ಯನೆಂತೆಂದೆನಿಸಿ ದೇ || ಸನ್ನುತಿಸಿ ಸೇವಿಸುವ ನರ ಸಂ | ಪನ್ನಭಾಗ್ಯಶ್ರಿ ನೆಂದೆನಿಸುವಾ | ಮುನ್ನ ಸಂತಾನಾದಿಗಳ ಕೊಟ್ಟೆನ್ನು ಪೊರೆವರ ನೋಡಿದೇ || ೩೧ || ಇಷ್ಟು ತುಂಗಾಸ್ನಾನ ಸರ್ವೋತ್ಕೃಷ್ಟ | ಗುರುಗಳ ದರುಶನಾ | ಶಿಷ್ಟ ಜನ ಸಹವಾಸ ಬಲು ಘನ | ವ್ಯಷ್ಟ ಅನ್ನ ಸುಭೋಜನಾ || ಸೃಷ್ಟಿ ಯೊಳಗೀ ಸೌಖ್ಯನಾ ಇನ್ನೆಷ್ಟು ಪುಡುಕಲು ಕಾಣೆವೂ| ಮುಟ್ಟಿ ಭಜಿಸುವ ಜನರ ಫಲ ಸ | ರ್ವೇಷ್ಟ ಹರಿತಾ ಬಲ್ಲನೂ || ೩೨ || ಜನರು ಈ ಪದ ನೆನೆದು ಪಾಡಲು | ಅನಘ ಶ್ರೀ ಅಭಿನವ ಜನಾ | ರ್ದನ ವಿಠಲ ಭವ |

ವಸಧಿ ದಾಟಿಸಿ | ಅನುದಿನದಿ ಸುಖಿಪೀವನೂ || ಮುನಿವರರ ಕಣ್ದಣಿಯ ನೋಡುತ | ಘನ ಮಂತ್ರಾಕ್ಷತೆ ಫಲಗಳೂ | ವಿನಯದಿಂದಲಿ ಕೊಂಡು ನಮಿಸುತ | ಪುನಹ ಗ್ರಾಮವು ಸೇರಿದೇ || ೩೩ ||

## ರಮಾಪತಿ ವಿಠಲ

### ೬೧ ಪದ —ರಾಗ—ಪೂರ್ವಿ—ಆದಿತಾಳ.

ಗುರುರಾಯಾ ಗುರುರಾಯಾ || ಪಲ್ಲ || ದುರಿತ ಕಳೆಯೋ ದಯ ಸಾಂದ್ರ ರಾಘವೇಂದ್ರ || ಅ. ಪ. || ನಮಿಸುವೆ ನಿನ್ನಡಿಗಮಿತ ವಿಧದಿ ಮಮ ಕಳೆಯೊ ಹೇವಿಮಲ ಸುತೇಜ || ೧ || ಆರ್ತ ಜನರ ಇಷ್ಟಾರ್ಥಮವರ್ಥಗಳನೆಲ್ಲ | ಪೂರ್ತಿಸಿ ಪೊರೆದು ಕೃತಾರ್ಥರ ಮಾಡುವಿ || ೨ || ಪವನನವರ ಮತ ಪ್ರವರನೆನಿಸಿ | ಶ್ರೀವರ ಸರ್ಚಿಸುತಿಹ್ಯ ಕವಿಕುಲಗೇಯ || ೩ || ಸರ್ವತ್ರದಿ ಹರಿ ಇರುವದು ನೋಡಿ | ಭೂ | ಪೂರ್ವ ದೇವತಿಗಳ ಗರ್ವ ಹರನೆ ಸದ್ಗುರು ರಾಯ || ೪ || ನೀನೆ ಗತಿಯೊ ಹೇ ದೀನ ವತ್ಸಲನೆ | ಜ್ಞಾನವನ್ನೆ ಕೊಡು ನಾನೆಂಬುದು ಕಳೆ || ೫ || ಪತಿತನು ನಾ ನಿಮ್ಮತಿಶಯ ಗುಣಗಳ | ತುತಿಸಬಲ್ಲನೆ ಯತಿಕುಲವರ್ಯಾ || ೬ || ಮಾರುತಿ ವರದ ರಮಾಪತಿ ವಿಠ್ಠಲನ | ತಾರತಮ್ಯ ತಿಳಿಸ್ಯಾರಾಧನೆ ಕೊಡು || ೭ ||

## ಗುರು ತಂದೆ ಗೋಪಾಲ ವಿಠಲ.

### ೬೨ ಪದ—ರಾಗ—ಪೂರ್ವಿ ತಾಳ—ಆದಿ

ಕಂಡೆ ನೋಡೆ ಇಂದು ರಾಘವೇಂದ್ರ ರಾಯರ। ಕಂಡೆ ನೋಡೆ ಇಂದು ರಾಘವೇಂದ್ರರಾಯರ ಪದ | ಪುಂಡರೀಕದಲಿ ಬಂಡುಣಿಗನಾಗಿ ನಿನ್ನ || ಪಲ್ಲ || ಕಠಿಣದೆಶಿಯಲಿ ಪಟುತರಜ್ಞಾನದಿಂ ಚಟಚಟನೆ ಭೇದಿಸಿ | ತಟಕದಿ ತೋರ್ದನ || ೧ || ಬಂಧು ನೀನೆಂದು ತವ್ಮ | ಸಂದರುಶನವ ವಿತ್ತು ಕಂದ ಜನಿಸುವನೆಂ ಛಂದದಿ ಫಲ ಕೊಡುವ || ೨ || ಏಸು

ಜನ್ಮದ ಪುಣ್ಯದೀ ಸುಖ ಪೊದಗಿತೋ । ಈ ಸಮಯದಲಿ ತನ್ನ ದಾಸನ್ನ ಮಾಡಿದವರ ॥೩॥ ಮಂಡಲಮೊಳಗೆ ಬಹು ಪಂಡಿತಾಗ್ರಣಿ । ಯೆನಿಸಲು । ದ್ದಂಡವಾದಿಗಳ ವಾಕು ಖಂಡ್ರಿಸಿ ಮೆರವರ ॥ ೪ ॥ ಶಿಂಧು ಶಯನನೆ ಗುರು ತಂದೆ ಗೋಪಾಲ ವಿಠ್ಠಲ್ಲ। ದ್ವಂದ್ವ ಚರಣದಲಿ ವಂದಿಸಿ ತುತಿಸುವರ ॥ ೫ ॥

**ಶೇಷಗಿರಿ ೬೩ ಪದ—ರಾಗ—ತೋಡಿ—ಝಂಪಿತಾಳ.**

ಪಾದುಕದ ಮಹಿಮೆಯನು ಪಂಡಿತರು ಕೇಳಿ । ಆದರದಿ ಸಾಷ್ಟಾಂಗ ಅವನಿ ವ್ಯಾಲಿಟ್ಟು ಬಾಳಿ ॥ ಪಲ್ಲ ॥ ಸ್ವಾದೆ ಪುರದಿ ಬಹಳ ಸೊಗಸು ಐಶ್ವರ್ಯ ದಿಹ । ವಾದಿ ವಂದ್ಯರ ಸಂಕೇತ ವನದಿ ಜನಿಸಿ ॥ ಮೋದದಿ ಪೀಠಗಳಾಗಿ ಮುಖ್ಯ ಮಧ್ಯ ರಾಷ್ಟ್ರದಲಿ । ಭೂದೇವ ರಾಘವೇಂದ್ರ ಭೂಪರಡಿಯಲಿ ಮೆರೆದ ॥ ೧ ॥ ಹರಿ ಗುರುಗಳನುಗ್ರಹ । ಹವಣದಲಿ ಪಡೆವದಕೆ । ಶ್ರೀಗಂಧವಾಗಿ ಶ್ರೀರಾಮನ । ಚರಣಕರ್ಪಿತವಾಗಿ ಚನ್ನಾಗಿ ತಾನೊಪ್ಪಿಸಿ । ಪರಿಪರಿಯಿಂ ಸೇವಿಸುತ ಪರಮ ಹಂಸರ ಸೇರಿ ಪಾವನಾಗುವೆಂದು ಬಂದು ॥ ೨ ॥ ಚಲುವ ಪೀಠ ಚಿತ್ರಾಸನದಿ ಚನ್ನಾಗಿ ಕುಳ್ಳಿರಿಸಿ । ಅಲಂಕಾರ ಸುವರ್ನ ಪುಷ್ಪಾಕ್ಷತೆ ಅರ್ಪಿಸಿ । ಸಲೆ ಧೂಪ ದೀಪ ನೈವೇದ್ಯವನೆ ಮಾಡಿ । ಬಲು ಆರ್ತಿ ಎತ್ತಿ ನಮಿಸೆ ಬೆಡಗಿನ ಭೀಷ್ಟಗಳನೀವ ॥ ೩ ॥ ಪಾ ಎಂದು ವುಚ್ಚರಿಸೆ ಪಾತಕ ಸಮೂಹ ಒದ್ದು । ದು ಎಂಬ ಶಬ್ದ ಕೇಳಿ ದೂರೋಡುವವು । ಕಾ ಎಂದು ಸ್ಮರಿಸಲು ಕಾಮಿಸಿದ ಭೀಷ್ಟಿಗಳ । ಪ್ರೀಯದೈಶ್ವರ್ಯ ಬಾಹದು ಪಿರಿಯ ರಾಘವೇಂದ್ರರ ಶ್ರೀ ॥ ೪ ॥ ಧೀರ ಶೇಷಗಿರಿಯ ಧೀಶ ಶ್ರೀ ವೆಂಕಟವಡಿಯ । ಚಾರು ತರದಿ ಪೊತ್ತು ನಲಿವ ಛಂದುಳ್ಳ ಪಾದುಕಾ॥ ಶೂರ ರಾಘವೇಂದ್ರ ಶಿರಸ ಸುಖದೊಹಿಸಿ । ಮೆರೆಯಲು ತಾರತಮ್ಯದವರ ಪಾದ ತಾನೆ ಪೊತ್ತು ಸುಕೃತೆಂಬೊ ॥ ೫ ॥

**ಶ್ರೀ ಗುರು ವಿಜಯ ವಿಠ್ಠಲ.**

**೬೪ ಸುಳಾದಿ (೨) ರಾಗ—ಭೈರವಿ—ತಾಳ ಧ್ರುವ**

ಘನ ದಯಾನಿಧಿಯಾದ ಗುರು ರಾಘವೇಂದ್ರ ನಿಮ್ಮ । ವನಜಪಾದ ಯುಗಕೆ ನಮೊ ನಮೊ । ಜನುಮಾರಭ್ಯವಾಗಿ ಅಭಿನಮಿಸದಲಿಪ್ಪ ।

ಮನುಜನ ಅಪರಾಧ ವೆಣಿಸದಲೆ। ವನಧಿ ಪೋಲುವ ಕರುಣಿ ಗೋವತ್ಸ ನ್ಯಾಯದಿಂದ। ನಿನಗೆ ನೀನೆ ಬಂದು ಸ್ವಪ್ನದಲ್ಲಿ। ಸನಕಾದಿ ಮುನಿಗಳ ಮನನಕೆ ಸಿಲುಕದ। ಇನಕೋಟಿ ಭಾಸ ವೇದೇಶ ಪ್ರಮೋದ ತೀರ್ಥ। ಮುನಿಗಳಿಂದಲಿ ಕೂಡಿ ಸಂದರುಶನ ವಿತ್ತು। ವಿನಯೋಕ್ತಿಗಳ ನುಡಿದ ಕೃತ್ಯದಿಂದ। ಆನಂದವಾಯಿತು ಅಘವೂರ ನಾದೆ ನಿಂದು। ದನುಜಾರಿ ಭಕುತರ ಮಣಿಯೆ ಗುಣಿಯೆ। ಎಣೆ ಗಾಣೆ ನಿಮ್ಮ ಕರುಣ ಕಟಾಕ್ಷ ವೀಕ್ಷಣಕ್ಕೆ। ಅನುಪಮ ಮಹಿಮನೆ ಅನಿಳ ಪ್ರೀಯ। ಗುಣಗಣ ಪೂರ್ಣಗುರು ವಿಜಯ ವಿಠ್ಠಲ ನಿಮ್ಮ। ಘನವಾವ ಬಲದಿ ಎನಗೆ ಸುಳಿದನೆಂದು ॥ ೧ ॥

॥ ಮಟ್ಟ ತಾಳ ॥

ಸುಖತೀರ್ಥರ ಮತ ವೆಂದೆಂಬ ಧ್ವಜವನ್ನು। ವಿಖನಸಾಂಡದ ಮಧ್ಯ ಪ್ರತಿಯಿಲ್ಲದೆ ಮೆರೆಯೆ। ಪಖರಹಿತವಾದ ಪಕ್ಷಿಯು ತನ್ನಯ। ಪಖ ಚಿನ್ಹಿಹ್ಯ ಜನಿತ ಮಾರುತನಿಂದಲಿ ಧ್ವಜವ। ಪ್ರಕಟದಿ ಚರಿಸುವ ಯತ್ನದಿಂದದಿ ದುರುಳ। ಸಕುಟಿಲರಾದ ಆ ವಿದ್ಯಾರಣ್ಯಾ। ಮುಖರೆಲ್ಲ ಬರಲು ಅಮಸ್ಥಿತ ನಿಶ್ಚಯದಿ। ಮುಖಶತ ನಿಜನೆನಿಪ ಜಯರಾಯಾಚಾರ್ಯ। ಪ್ರಕಟ ಗ್ರಂಥಗಳೆಂಬ ಪಾಶಗಳಿಂದಲ್ಲಿ। ಯುಕುತಿಯಿಂದಲಿ ಬಿಗಿದು ವೀರಧ್ವನಿಯ ಗೈಯೆ। ಉಕುತಿಗೆ ನಿಲ್ಲದಲೆ ಮೊಲದಂತೆ ಜರಿದ್ಯ ದಿಕ್ಕು ದಿಕ್ಕಿನಲ್ಲಿ ಪಲಾಯನರಾಗೆ। ತ್ಯಕುತ ಲಜ್ಜೆಯಲಿಂದ ಹತವಾಶೇಷ್ಯನಾ। ಗ ಕುಂಠಿತವಾದ ಬಲವೀರ್ಯನು ಮೀರು। ಶಿಖರ ಎತ್ತುವೆನೆಂಬ ಸಹಸದಂದದಲಿ। ವಿಕಟ ಮತಿಯುಕ್ತ ದುರುಳರು ರೋಷದಲಿ ಕು। ಯುಕುತಿಗಳಿಂದಲಿ ಸಂಚರಿಸುತ ಬರಲು। ಲಕುಮಿ ಪತಿಯ ನೇಮ ತಿಳಿದ ಪ್ರೌಢ ನೀನು। ಈ ಖಂಡದಿ ಬಂದು ದ್ವಿಜ ಜನ್ಮವ ಧರಿಸಿ। ಪ್ರಖ್ಯಾತವಾದ.ನ್ಯಾಯಾಮೃತವನ್ನು। ತರ್ಕ ತಾಂಡವ ಚಂದ್ರಿಕ ಪರಿಮಳ ಮೊದಲಾದ। ಮಿಕ್ಕಾದ ಗ್ರಂಥವೆಂತೆಂಬ ವಜ್ರದಲಿ ದು। ರುಕುತಿಗಳಿಂಬಂಥ ಗಿರಿಗಳ ಭೇದಿಸಿ। ಈ ಕುಂಭಣಿ ಮಧ್ಯ ಪ್ರತಿಯಿಲ್ಲದೆ ಮೆರದೆ। ಭಕತರಾ ಗ್ರೇಸರನೆ ಭೂವಿ ಬುಧರ ಪ್ರೀಯಾ। ನಖಶಿಖ ಪರಿಪೂರ್ಣ ಗುರು ವಿಜಯ ವಿಠಲನಿಮ್ಮ ಭಕುತಿಗೆ ವಶನಾಗಿ ಯಿತ್ತಿಹ್ಯ ಕೀರ್ತಿಯನು ॥ ೨ ॥

|| ತ್ರಿವಿಡಿ ತಾಳ ||

ಕಲಿಯುಗದಿ ಜನರು ಕಲಿ ಕಲ್ಮಷದಿಂದ | ಬಲವಂತವಾದ ತ್ರಿವಿಧ ತಾಪಗಳನು | ವಿಲಯಾಗೈಸುವ ಉಪಾಯವನರಿಯದೆ | ಮಲಯುಕ್ತ ವಾದ ಭವ ಶರಧಿಯಲ್ಲಿ | ನೆಲೆಯಾಗಿ ಮಗ್ನರಾಗಿ ನಿವೃತ್ತಿವತ್ಮಾ್ರ್ವನ್ನು | ತಿಳಿಯದಲೆ ದುಃಖಬಡುವ ಸುಜನಾ | ವಳಿಗೆ ತಾರಕನಾಗಿ ಈ ನದಿಯ ತೀರದಲ್ಲಿ | ನಿಲಯಾ ವಲ್ಲದೆ ನಿನಗೆ ಅನ್ಯಕೃತ್ಯಗಳಿಲ್ಲ | ನಳಿನ ಸಂಭವ ಜನಕ ಗುರು ವಿಜಯ ವಿಠಲ ನಿನಗೆ | ಒಲಿದಿಪ್ಪಾಧಿಕಧಿಕವಾಗಿ ಬಿಡದೆ || ೩ ||

|| ಅಟ್ಟ ತಾಳ ||

ಸೂಚನೆ ಮಾಡಿದ ಸೊಬಗಿನ ತೆರವಂತೆ | ಯೋಚನೆ ಯಾತಕ್ಕೆ ನ್ನನು ಉದ್ಧರಿಪದಕ್ಕೆ | ಊಚಜ್ಞಾನಾನಂದ ಬಲವೀರ್ಯನು ನೀನು | ನೀಚವಾದ ದೇಹಧಾರಣೆಯನು ಮಾಡಿ ಅ | ನೂಚಿತವಾಗಿದ್ದ ಕಾಮ| ಕ್ರೋಧಂಗಳು | ಆಚರಣೆಯ ಮಾಳ್ಪ ಅಧಮ ನಾದವ ನಾನು | ಸೂಚ ರಿತ್ರವಾದ ಶುಚಿಯಾದ ಮನುಜಂಗೆ | ನೀಚ ಅಶುಚಿಯಾದ ನರನು ಅಧಿ ಕನೆಂದು | ಭೂಚಕ್ರದಲಿ ಅವರ ದೇಹ ತೆತ್ತವನಾಗಿ | ಆಚರಿಸಿದೆ ಬಲು ಹೀನಕೃತ್ಯಂಗಳು | ಸೂಚನೆ ಮಾಡಿದ್ದು ಸೊಬಗು ನೋಡದಲೆ | ಯೋ ಚನೆ ಮಾಡಿದ್ದು ಸಾರ್ಥಕ ಮಾಳ್ಪದು | ಮೋಚನೆ ಮಾಡುವದು ಭವ ಬಂಧದಲಿಂದ ಶ್ರೀ ಚಕ್ರಪಾಣಿ ಗುರುಗು ವಿಜಯ ವಿಠಲರೇಯನ | ಯೋ ಚನೆ ಮಾಡುವ ಯೋಗವೆ ಬೋಧಿಸು || ೪ ||

|| ಆದಿ ತಾಳ ||

ಪರಿಶುದ್ಧವಾದ ನಿನ್ನ ಭಕುತಿಗೆ ವಶನಾಗಿ | ಹರಿ ತನ್ನ ಪರಿವಾರ ಸಮೇತನಾಗಿ ನಿಂದು | ಮೊರೆಹೊಕ್ಕ ಜನರಿಗೆ ಪರಿಪೂರ್ಣ ಸುಖವಿತ್ತು | ಪರಿ ಪರಿ ಕೀರ್ತಿಗಳು ತಃದೀವ ನಿಮಗೆಂದು | ಪರಮಾಪ್ತನಾಗಿ ತವ ಪಾದ ಸಾರಿದೆನು | ದೂರ ನೋಡದಲೆ ಕರುಣಮಾಡಿ ವೇಗ | ಸುರರಿತ್ತ ಶಾಪದಿಂದ ಕಡಿಗೆ ಮಾಡಿ ಎನ್ನ ಹೃ | ತ್ಸರಸಿಜದಲ್ಲಿ ಹರಿ ಪೊಳೆವಂತೆ ಮಾಡುವದು | ಪರಿಪೂರ್ಣ ಕೃಪಾನಿಧೆ ಗುರು ವಿಜಯ ವಿಠಲನ್ನ | ಶರ ಣರ ಅಭಿಮಾನಿ ಔದಾರ್ಯ ಗುಣಮಣಿ || ೫ ||

|| ಜತ್ತೆ ||

ಗುರುಕುಲ ತಿಲುಕನೆ ಗುರು ರಾಘವೇಂದ್ರಾಖ್ಯ । ಸುರ ಕಲ್ಪತರು ಗುರು ವಿಜಯ ವಿಠ್ಠಲ ಪ್ರೀಯ || || ೬ ||

**ಶ್ರೀಗುರು ಪ್ರಾಣೇಶ ವಿಠಲ**

**೬೫ ಪದ—ರಾಗ—ಧನಾಶ್ರಿ—ಅಟ್ಟತಾಳ.**

ತಪ್ಪುಗಳೆಣಿಸಾದೆನ್ನಪ್ಪ ಕಾಯಲಿಬೇಕು । ಸರ್ಪ ಶಯನನ ದೂತಾ|| ಇಪ್ಪತ್ತು ಒಂದು ಕುಂಭಾಷ್ಯ ಮುರಿದರ (ಸು) ಮತ ಪ್ರವರ್ತಕ ರಾಘವೇಂದ್ರ ಮುನಿಪ ಮಹ || ಪಲ್ಲ || ಪ್ರತಿ ವರುಷಕೆ ಬಂದು ನುತಿಸಿ ಪೋಗು ಯೆಂದು । ನತಸ್ವಪ್ನದಲಿ ನೀ ಬಂದು || ಹಿತದಿಂದ ಪೇಳಲುರತನಾಗಿ ಧನದಿ ಮ । ರೆತು ಬಿಟ್ಟೆ ನಿಮ್ಮನು ಯತಿಕುಲೋತ್ತುಮ ಇಂಥ || ೧ || ಸ್ನಾನ ಸಂಧ್ಯಾನ ಸು ಜಪತಪ ವ್ರತಹೋಮ ಮೌನ ಮಾರ್ಗಗಳರಿಯೇ || ಜ್ಞಾನಿಗಳಾನು ಸಂಧಾನ ಪೂರ್ವಕ ಪೂಜೆ । ಯಾನು ಮಾಡದೆ ದುಷ್ಟ ಮಾನವರೊಳಗಿದ್ದೆ || ೨ || ಏಸು ಜನ್ಮದಿ ಬಂದ ದೋಷವ ಕಳೆದು ವಿ । ಶೇಷ ಸುಖವ ಕೊಡುವ || ಈ ಸುವಾರ್ತೆಯು ಕೇಳಿ ಮೊರೆಹೊಕ್ಕೆ ಗುರು ಪ್ರಾ । ಣೇಶ ವಿಠ್ಠಲನ ದೂತಾ ಮತ್ಪ್ರೀತಾ || ೩ ||

**೬೬ ಪದ—ರಾಗ—ಕೇದಾರಗೌಳ—ಅಟ್ಟತಾಳ.**

ತಂಗಿನೀ ಕೇಳಿದ್ಯಾ ರಾಘವೇಂದ್ರಾ । ಘಂಗಳ ಕಳದು ಸುಖಂಗಳ ಕೊಡುವುದು । ತಂಗಿ ನೀ ಕೇಳಿದ್ಯಾ || ಪಲ್ಲ || ಶ್ರೀ ಪೂರ್ಣ ಬೋಧರ ಮತ ಪಯೋಬ್ಧಿಗೆ ಚಂದ್ರ|| ತಾಪಸೋತ್ತುಮರ ದಿವ್ಯಾಪಾರ ಮಹಿಮೆಯು || ೧ || ಅಂಗಹೀನರಿಗೆ ದಿವ್ಯಾಂಗ ಕೊಟ್ಟರೆಂದು । ಸಂಗೀತ ಮುಖದಿ ಜನಂಗಳು ಪಾಡುವರು || ೨ || ಕಿವಿಯಿಲ್ಲದವರಿಗೆ ತವಕದಿ ಕೊಟ್ಟರೆಂದು || ಸುವಿವೇಕಮನದಿಂದ । ಕವಿಜನ ಪಾಡುವುದು || ೩ || ವಂಧ್ಯಸ್ತ್ರೀಯರು ಬಂದು ನಿಂದು ಆರಾಧಿಸೆ || ಸಂದೇಹವಿಲ್ಲ ಬಹುಮಂದಿ

ಮಕ್ಕಳ ಕೊಟ್ಟ ॥ ೪ ॥ ಗುರು ಪ್ರಾಣೇಶ ವಿಠಲ ಸರುವ ಕಾಮಿತಾರ್ಥವ। ಗುರು ರಾಘವೇಂದ್ರರಲ್ಲಿ ನಿರುತದಿ ಕೊಡಿಸುವ ॥ ೫ ॥

## ಶ್ರೀಶ ಪ್ರಾಣೇಶ ವಿಠಲ.

### ೬೭ ಪದ—ರಾಗ—ಭೈರವಿ ಆದಿತಾಳ

ರಾಯರ ನೋಡಿರೈ ಶ್ರೀ ಗುರು ರಾಯರ ಪಾಡಿರೈ ॥ ಶ್ರೀಯರಸನ ಪ್ರೀಯ ಕಂಜಾಪ್ತಾಭ ಸುಕಾಯಾ। ಕವಿಜನಗೇಯಾ ॥ ಪಲ್ಲ ॥ ಶ್ರೀ ಸುಧೀಂದ್ರಕರ ಕಮಲದಲಿ ಸಂಭೂತಾ ಬಹುವಿಖ್ಯಾತಾ। ಶ್ರೀಶನ ಗುಣಗಳ ತುತಿಸುವ ಯತಿ ಶಿರೋಮಣಿಯೊ। ಚಿಂತಾಮಣಿಯೊ ॥ ಈ ಸುಜನರ ಮನಸಿಗೆ ತೋರುವದಹಲ್ಲಾದ ಸಿರಿ ಪ್ರಲ್ಹಾದ ॥ ೧ ॥ ದಂಡ ಕಮಂಡುಲ ಕಾಷಾಯುವುಸುವಸನ। ವೇದವ್ಯಸನ। ಪುಂಡರೀಕ ಪದಬೃಂಗಾ ಮುನಿಕುಲೋತ್ತುಂಗ ॥ ಮಂಡಲದೊಳು ಬಹು ತೋಂಡರ ಪರಿಪಾಲಕಾ ವರ ಬಾಲ್ಹೀಕ ॥ ೨ ॥ ತುಂಗಾ ತೀರದಿ ಮಂತ್ರಾಲಯದೊಳಗಿರುವೊ। ಕಲ್ಪ (ದ) ತರುವೊ। ಗಂಗಾ ಜನಕ ವಿಹಂಗ ವಾಹನ ಇಲ್ಲಿಹ್ಯನು। ನತಸುರ ಧೇನು। ಮಂಗಳ ಮಹಿಮರ ದರುಶನ ಮಾತ್ರ ಘನಾಶಾ। ಶ್ರೀ ಗುರುವ್ಯಾಸ ॥ ೩ ॥ ಪರಿಮಳ ವಿರಿಚಿಸಿ ಬುಧರಿಗೆ ಬೀರಿದ ಧೀರ ಗುಣ ಗಂಭೀರ ॥ ಪರಿ ಪರಿ ಚರಿತೆಯ ತೋರ್ದ ಭೂದೇವರ ದೇವ। ದೇವ ಸ್ವಭಾವ ॥ ನರ ಇವರನ ಕ್ಷಣ ಬಿಡದಲೆ ಭಜಿಸಲು ಸುಖವು। ಅಹಿಕಾಮುಕವು [ಅಘ ಪರಿಹರವು] ॥ ೪ ॥ ದುಷ್ಟ ಮತವ ಖಂಡಿಸಿ ಹರಿಪರನೆಂದೊರದಾಭೀಷ್ಟಿಯ ಗರೆದಾ ॥ ಸೃಷ್ಟಿಯೊಳಗೆ ಶ್ರೀಶ ಪ್ರಾಣೇಶ ವಿಠಲನ ದಾಸ ಮುನಿಕುಲೋತ್ತಂಸ। ಎಷ್ಟು ಪೊಗಳಾಶಕ್ಯವು ಸದ್ಗುಣ ಸಾಂದ್ರಾ ಶ್ರೀ ರಾಘವೇಂದ್ರ ॥ ೫ ॥

### ೬೮ ಮಂಗಳ ಪದ ರಾಗ ಪೂರ್ವಿ ಆದಿ ತಾಳ.

ಶ್ರೀ ರಾಘವೇಂದ್ರ ರಾಯಾ ಸೂರಿ ಪರಾಕು। ಪರಿಮಳ ವಿರಿಚಿಸಿದವನೆ ಪರಾಕು ॥ ಧರೆಯೊಳು ಮಂತ್ರಾಲಯ ನಿಲಯ ಪರಾಕು। ಗುರು

ಸುಧೀಂದ್ರರ ಕುವರ ಪರಾಕೆಂದು ಹರದೇ ರಾರುತಿಯಾ ಬೆಳಗಿರೆ ॥ ೧ ॥ ದಂಡ ಕಮಂಡುಲಧರ ಪರಾಕು । ಪಂಡಿತರೊಡಿಯ ವಿಕ್ರಮನೆ ಪರಾಕು॥ ಚಂಡ ದುರ್ವಾದಿ ಮತ ಮುರಿದ ಪರಾಕು । ಗಂಡುಗಲಿ ಹರಿಯಾ ಪರಾಕೆಂದು ಪುಂಡಲೀಕ ದಾರುತಿಯಾ ಬೆಳಗಿರೆ ॥ ೨ ॥ ಶ್ರೀಶ ಪ್ರಾಣೇಶ ವಿಠಲಾ ದೂತ ಪರಾಕು । ಶ್ರೀಶನ ಗುಣಗಳ ತುತಿಪ ಪರಾಕು । ಆಸೇತು ಹೇಮಂತ ಮೆರೆವ ಪರಾಕು । ದೇಶಿಕ ಶ್ರೇಷ್ಠ ನಿರ್ದುಷ್ಟ ಪರಾಕೆಂದು । ಸಾಸಿರ ಆರುತಿಯಾ ಬೆಳಗಿರೆ ॥ ೩ ॥

## ಲಕ್ಷ್ಮೀಪತಿ ವಿಠಲ

### ೬೯ ಪದ—ರಾಗ—ಶಂಕರಾಭರಣ—ಅಟ್ಟತಾಳ.

ಈತನೇ ಗುರು ರಾಘವೇಂದ್ರಾ । ಖ್ಯಾತಾ ಕಾಣಿರ್ಯೊ ॥ ವಾತ ಮತ ದುಗ್ಧಾಬ್ಧಿ ಚಂದ್ರ ಸು । ಖಾತಿಶಯಗಳ ನೀವ ನಿರುತ ॥ ಪಲ್ಲ ॥ ಹಿಂದೆ ಹೇಮ ಕಸ್ಯಪನ ಸುತ । ನೆಂದು ಕರಸಲು ವೊಂನಮಃ ಶಿವ । ಯೆಂದು ಬರೆಯಲು ಹೇಳಲಾ ಪಿತನೂ ॥ ನಾರೇಯಣನೆ ಪರನೆಂದು ಬರೆಯಲು ರೋಷದಲಿ ಖಳನೂ ॥ ತೋರೆಲವೊ ಸ್ತಂಭದಿ ಯಿಂದು ನಿನ್ನನು ಕಾವ ದೇವರನೂ ಯೆಂದೆನ್ನಲವನೂ ॥ ಯಿಂದಿರೇಶನ ದ್ವಂದ್ವ ರೂಪವ ಅಂದು ತೋರಿದ ಮಹಿಮನೊ ॥ ೧ ॥ ವ್ಯಾಸ ಮುನಿಯಾಗೆ ವತರಿಸಿ ಜೀ । ವೇಶರೊಂದೆಂತೆಂಬ ಮಾಯಿಗಳಕು । ಭಾಷ್ಯಗಳೆಲ್ಲಾ ತಾ ಕೆಡಸೀ । ಸರ್ವಜ್ಞ ಶಾಸ್ತ್ರವ ॥ ಲೇಶಿನಲಿ ಸಜ್ಜನಕೆ ಬೋಧಿಸಿ ದುರ್ವಾದಿಗಳ ಸಚ್ಛಾಸ್ತ್ರವೆಂಬಸಿಯಲ್ಲಿ ಖಂಡ್ರೀಸಿ । ಹರಿ ಪ್ರೀತಿಗೊಳಿಸಿ ॥ ಕೇಶವನೆ ಪರನೆಂದು ಸಾರುತ । ದಾಶರಥಿ ನಿಜದಾಸ್ಯ ಪಡೆದ ॥ ೨ ॥ ವರಹ ದಂಷ್ಟ್ರ ಜಯಳ ಸುತೀರದಲಿರುವ ಮಂತ್ರಾಲಯದ ಸ್ಥಳದೀ । ವರಸು ವೃಂದಾವನದಿ ರಾಜಿಸುತಾ ಭೂ । ಸುರರು ಮಾಡುವ ಪರಮ ಆರಾಧನೆಯ ಕೈಕೊಳುತಾ । ತ್ರಿವಿಧರ್ಗೆ ತಕ್ಕ । ವರಗಳನುದಿನದಲ್ಲಿ ನೀಡುತ್ತ । ಜಗದೊಳು ಪುನೀತಾ ॥ ಗುರು ಸುಧೇಂದ್ರ ಸುತೀರಥರ ಸಿರಿ । ಕರಕಮಲ ಸಂಜಾತಾ ಪ್ರೀತಾ ॥ ೩ ॥ ಮೆರೆವ ದ್ವಾದಶನಾಮ ಮುದ್ರಿಯು । ಕರದಿ

ದಂಡ ಕಮಂಡುಲವು ಶ್ರೀ । ತರುಳ ತುಲಸೀ ಸರವು ಕೊರಳಲ್ಲಿ ಶ್ರೀ। ಹರಿಯ ಧ್ಯಾನವು ನಿರುತ ಮಾಡುತ ತನ್ನ ಮನದಲ್ಲಿ ಸುಕ್ಷೇತ್ರ ತೀರ್ಥಕೆ । ಸರಿ ಮಿಗಿಲು ಯೆನಿಸುತ್ತಲಿಹ್ಯದಿಲ್ಲಿ । ಯಿವರಂಘ್ರಿಯಲ್ಲೀ ॥ ನಿರುತ ಸೇವೆಯ ಮಾಳ್ಪ ಜನರ್ಗಿಗೆ । ಪರಮ ಸುಖಗಳನೇ ಕೊಡುವರಲ್ಲಿ ॥ ೪ ॥ ಚತುರ ವಿಧ ಫಲಗಳನು ಕೊಡುತಾ । ಯತಿ ಶಿರೋಮಣಿ ನಾಮದಲಿ ಶ್ರೀ । ಪತಿಯು ತಾನೇ ಚಕ್ರ ರೂಪದಲೀ । ಯಿವರಲ್ಲಿ ನಿಂತೂ । ಕೃತಿಯ ನಡೆಸುವ ಸರ್ವ ಕಾಲದಲೀ । ಈ ಮಹಿಮೆಯನುನಾ ತುತಿಸಬಲ್ಲೆನೆ ಅಲ್ಪ ಮತಿಯಲ್ಲಿ । ಸದ್ಭಕ್ತಿಯಲ್ಲೀ ॥ ತುತಿಸುವರ ಪಾಲಿಸುವ ಲಕ್ಷ್ಮೀ । ಪತಿ ವಿಠಲ ಸತ್ಕರುಣದಲ್ಲಿ ॥ ೫ ॥

## ತಂದೆ ಶ್ರೀಪತಿ ವಿಠಲ.

### ೭೦ ಪದ—ರಾಗ—ರೇಗುಪ್ತಿ —ತಾಳ ರೂಪಕ

ವೃಂದಾವನದಿ ವಿರಾಜಿಪ ಯತಿವರನ್ಯಾರೆ ಪೇಳಮ್ಮಯ್ಯ ॥ ಪಲ್ಲ ॥ ಇಂದಿರೆ ಅರಸನ ಛಂದದಿ ಭಜಿಸುವ ಕುಂದರಹಿತ ರಾಘವೇಂದ್ರ ಕಾಣಮ್ಮ ॥ ಅ ಪ ॥ ಮಂತ್ರಾಲಯ ಕೃತ ಮಂದಿರ ನೆನಿಸುವ ನ್ಯಾರೆ ಪೇಳಮ್ಮಯ್ಯಾ। ತಂತ್ರದೀಪಿಕಾ ಗ್ರಂಥಕರೆನಿಸುವ ರ‍್ಯಾರೆ ಪೇಳಮ್ಮಯ್ಯ । ಕಂತು ಪಿತನ ಸತ್ಪಂಥದಿ ಭಜಿಸುವರ‍್ಯಾರೆ । ಪೇಳಮ್ಮಯ್ಯಾ ॥ ಚಿಂತಿತ ಫಲದ ದುರಂತ ಶಕ್ತ ಜಯವಂತ ಈತ ಅಘುಶಾಂತ ಕಾಣಮ್ಮಾ ॥ ೧ ॥ ಶ್ರೀ ಸುಧೀಂದ್ರ ಕರ ಕಮಲಜ ರೆನಿಸುವರ‍್ಯಾರೆ । ಪೇಳಮ್ಮಯ್ಯ । ಆ ಸುಖಮುನಿ ಮತ ಸ್ಥಾಪಕರೆನಿಸುವರ‍್ಯಾರೆ । ಪೇಳಮ್ಮಯ್ಯಾ । ತಾಸುಕರದಿ ಮಂತ್ರಾಕ್ಷತೆ ಕೊಡುತಿಹ್ಯನಾರೆ ಪೇಳಮ್ಮಯ್ಯಾ । ಭಾಸುರ ಜ್ಞಾನಿ ವಿಶೇಷವಾಗಿ ಹರಿ ದಾಸ್ಯವ ಪಡೆದ । ಯತೀಶ ಕಾಣಮ್ಮಾ ॥ ೨ ॥ ಧಾರುಣಿ ಪತಿಗೆಳ [ಜಲ] ತೀರದಿ ನೆಲಸಿಹ್ಯ ನ್ಯಾರೆ ಪೇಳಮ್ಮಯ್ಯಾ । ಕಾರುಣ್ಯನಿಧಿ ಅಪಾರ ಮಹಿಮ ನಿವನಾರೆ ಪೇಳಮ್ಮಯ್ಯಾ । ಸಾರಿ ಭಜಿಪರ ಭಾರಿ ಭಾರಿಗೆ ಪೊರೆವನಾರೆ ಪೇಳಮ್ಮಯ್ಯಾ ॥ ನಾರಾಯಣ ತಂದೆ ಶ್ರೀಪತಿ ವಿಠಲನ । ಆರಾಧಿಪ ರಾಘವೇಂದ್ರ ಕಾಣಮ್ಮಾ ॥ ೩ ॥

## ವೆಂಕಟೇಶ

### ೬೧ ಪದ —ರಾಗ—ಸುರಟಿ—ಅಟ್ಟತಾಳ.

ಪಾಲಿಸೊ ಸದ್ಗುಣ ಸಾಂದ್ರ । ಶ್ರೀ ರಾಘವೇಂದ್ರ ॥ ಪಲ್ಲ ॥ ಯತಿ ಕುಲ ತಿಲಕ ಸದ್ಗತಿ ದಾಯಕನೆ । ದುರ್ಮತ ಖಂಡನ ಘೋರ ದುರಿತ ವಿದೂರಾ ॥ ಕುಲುಷ ಹಾರಾ ॥ ೧ ॥ ಭಕ್ತ ಸ್ತೋಮ ಭವ ಭಯ ಪರಿಹಾರ । ವಿರಕ್ತ ಮುನೇಂದ್ರ ಶ್ರೀ ಗುರು ಸಾರ್ವಭೌಮಾ । ಸುಜ್ಞಾನಾಬ್ಧಿ ಸೋಮ ॥ ೨ ॥ ದೋಷ ವರ್ಜಿತ ವೆಂಕಟೇಶನ ದೂತಾ । ದಾಸಾ ನಿನ್ನವ ನೆಂದು ಪೋಷಿಸೋ ತ್ವರಿತಾ । ಬಿನ್ನೈಸುವೆ ನಿರುತ ॥ ೩ ॥

## ಕಮಲೇಶ ವಿಠಲ

### ೬೨ ಪದ—ರಾಗ—ಬೇರಾಗ—ಆದಿ ತಾಳ

ಶರಣರ ಸುರಭೋಜಾ । ಗುರು ರಾಜಾ ॥ ಪಲ್ಲ ॥ ವರ ಮಂತ್ರಾಲಯ ಪುರ ಮಂದಿರ ಸುಂದರ ಮುನೀಂದ್ರ ಭಾಸ್ಕರ ಸಮತೇಜಾ ॥ ೧ ॥ ಕಾಮಿತಾರ್ಥಗಳ ಕಾಮಧೇನುವಿ ನೀ ವಿಾರಿಕೊಡುವ ಮಹರಾಜಾ ॥ ೨ ॥ ಕೇಶ ಕೋಟಿ ಸಂಕಾಶ ನಾದ ಕಮಲೇಶ ವಿಠ್ಠಲನ । ದಾಸನೆ ಸಹಜ ॥ ೩ ॥

## ಶೀಶ ಕೇಶವ ವಿಠಲ

### ೬೩ ಪದ—ರಾಗ—ಧನಾಶ್ರಿ—ಅಟ್ಟತಾಳ.

ರಾಘವೇಂದ್ರ ಗುರು ರಾಜಾ ಸುತೇಜಾ ॥ ಪಲ್ಲ ॥ ಸಾನುರಾಗದಿ ನಿನ್ನ ಧ್ಯಾನ ಮಾಡದ । ಹೀನ ಮಾನವ ನಲ್ಲೆನು । ಮಾನವಿಲ್ಲದೆನಾ । ಮಾನ ಗೈಯಲಿ ಬೇಕೆಂದು । ಮಾನದಲಿ ನಿದಾನಿಸಲಾಗೆ ಬಂದು । ಸತ್ವರ ದಿಂದ ನೀನೆ ಹೃದಯದಿ ನಿಂದು । ಆಕ್ಷಣ ಎನ್ನ । ಜ್ಞಾನಾಂಧಕಾರಕೆ ಭಾನುರೂಪನಾದಿ ॥ ೧ ॥ ಕರುಣ ಸಾಗರ ನಿನ್ನ ಚರಣ ಸೋಕಲು ಲೋಹ । ಪರಶು ತಾಕಲು ಚಾಮಿ। ಕರನಾದತೆರ ನಿನ್ನ । ದುರಿತ ರಾಶಿಯ

ತರಿದು ದೂತನಮೇಲೆ । ಪರಮಾನುಗ್ರಹ ಗರೆದು ] ಪೊರೆದೆನೆಂಬಬಿರಿದು ] ಲೋಕದಿ ಮೆರೆದು ] ಸಾರುತಲಿದೆ ಪರಮ ಹಂಸ ಗುರು ॥ ೨ ॥ ಶ್ರೀಶ ಕೇಶವ ವಿಠಲೇಶನ ಕರುಣಾ ವಿಲಾಸದಿ ಸುಖಿಸುವ ] ರೀಸವುಯುದಲೆನ್ನಾ। ದೋಷ ವಿಚಾರಿಸದೆ ಮಮತೆಯಿಂದ । ಪೋಷಿಪರೆಂದರಿದೆ ಕಂಡ ಕಡಿ । ಆಶಿಯಿಂದಲೆ ಬರಿದೆ ಚರಿಸಲು । ಉದಾಸಿಸದಲೆ ಪೊರದೆ ಸುಕೃತ ॥ ೩ ॥

## ಶ್ರೀಶ ಕೇಶವ ವಿಠಲ

### ೭೪ ಪದ—ರಾಗ—ಸಾವೇರಿ—ಆದಿತಾಳ.

ಗುರುವೆ ಕರುಣದಿಂದ ನೋಡೊ । ನಿನ್ನ ತರುಳನೆಂದು ದಯ ಮಾಡೋ । ದುರಳರೊಳತಿ ದುರಳನರನಾ ] ಮೊರೆಯ ಪೊಗುವೆನು ಪೊರೆಯೊ ಅಸ್ಮದ್ಗುರುವೆ ॥ ಪಲ್ಲ ॥ ಸುಧೀಂದ್ರ ಕರ ಕಂಜಜಾತ ] ಈ ವಸುಧಿಯೊಳು ಪರಮ ಪ್ರಖ್ಯಾತ । ಸದಮಲ ಶುಭಗುಣ ನಿಧಿ ನಿರ್ಮಲ ಜ್ಞಾನ । ಪ್ರದ ಪ್ರೇಕರನಾಗಿ ] ಮದಡ ಮತಿಯ ಬಿಡಿಸೊ । ಪದುಮ ನಾಭನ ಪದ ಪದುಮ ಪದೋ ಪದಿಗೆ ] ಹೃದಯದಿ ಮುದದಿ ಧೇನಿಪ ] ಮುದ ಮುನಿಯ ಮತ ಉದಧಿಗೆ ಚಂದ್ರ ॥ ೧ ॥ ಪಂಚ ಬಾಣನ ನಿರಾಕರಿಸಿ । ಪಂಚ ಪಂಚ ಕರಣವ ಸ್ವೀಕರಿಸೀ । ಪಂಚ ಮುಖನೆ ಪರನೆಂಬ ವಾದಿಯ ಮತ ] ಮುಂಚೆ ಮುರಿದನೆಂದು । ಸಂಚಕಾರವ ಪಿಡಿದು । ಸಂಚರಿಸಿ ಅವರುಕುತಿ ನಿಲ್ಲಿಸಿ ಪ್ರಪಂಚ ದೊಳಗಿಹ್ಯ ಸರ್ವಜನ ಮನೊವಾಂಛಿತವ ಗರೆದವ ನೀ ಮುನ್ನ ಪೊರದಂತೆ ಎನ್ನ ॥ ೨ ॥ ದೇಶ ದೇಶದಿ ತವಕೀರ್ತಿ ತುಂಬಿ ] ಸೂಸಿ ಪರಿವದೆಂಬ ವಾರ್ತೆ । ಲೇಸಾಗಿ ಕೇಳಿ ಬಂದಾ ಸುಜನರ ಮನ। ದಾಸೆ ಪೂರೈಸು ವಿಶೇಷ ಫಲವ ನಿತ್ಯ । ಮಾ ಸರೋಜ ಯೆಪ್ವಾವ್ಯೇಮ ಕೇಶಾ ಮರೇಶ ಮುಖರಿಗೆ। ಈಶರೆನಿಸುವ ಶ್ರೀಶ ಕೇಶವ ವಿಠಲೇಶನ ದಾಸಾ ತುಂಗಾ ನಿವಾಸಾ ॥ ೩ ॥

## ಅನಂತಾದ್ರೀಶ

### ೭೫ ಪದ —ರಾಗ—ಸುರಟಿ—ಆದಿ ತಾಳ.

ಭೋಯತಿ ವರದೇಂದ್ರಾ । ಶ್ರೀ ಗುರುರಾಯ ರಾಘವೇಂದ್ರಾ ] ಕಾಯ ನಿನ್ನ ಶುಭಕಾಯ ಭಜಿಸುವರ ಕಾಯೊ । ತವಕದಿ ಚಂದ್ರಾ ॥ಪಲ್ಲ॥

ನೇಮಿಸು ಎನ್ನಗೆಲ್ಲಿ । ಇರುವದು ಕಾಮಿಯಾದವನಲ್ಲಿ ] ಭೂ ಮಹಾ ಮಹಿಮನ ಪಾಮರನೊ ನಿನ್ನ । ನಾನು ಒಂದೆ ಬಲ್ಲೆ ॥ ೧ ॥ ಕಂಡ ಕಂಡ ಕಡಿಗೆ ತಿರುಗುತ । ಬೆಂಡಾದನು ಕೊನೆಗೆ । ಕಂಡವರನು ಬಲು ಕೊಂಡಾಡುತ । ದಣಕೊಂಡೆ ಕಟ್ಟಕಡೆಗೆ ॥ ೨ ॥ ಮಂತ್ರವು । ನಾಸರಿಯೆ ಶ್ರೀಮನ್ ಮಂತ್ರಾಲಯ ಧೊರಿಯೆ । ಅಂತರಂಗದಲಿ ಸಿಂತು ಪ್ರೇರಿಸುವ [ಭಜಿಸೊ] ನಂತಾದ್ರೀಶ ಧೊರಿಯೆ ॥ ೩ ॥

## ಅನಂತಾದ್ರೀಶ

### ೭೬ ಪದ—ರಾಗ—ಆನಂದಭೈರವಿ—ತಾಳ ಏಕ.

ಎಂದು ಕರುಣದಿಂದ ನೋಡುವಿ । ರಾಘವೇಂದ್ರ ಗುರುವೆ ಎಂದು ಸಮುಗಾನಂದ ನೀಡುವಿ ॥ ಪಲ್ಲ ॥ ಎಂದು ಕರುಣದಿಂದ ನೋಡುವಿ । ನೊಂದು ತಾಪದಿಂದ ಬಹಳ । ಬೆಂದು ನಿನ್ನ ಕಂಡನೆಂತೆಂದು ಪಾದಕೆ ] ಹೊಂದಿದವನ ॥ ಅನು ಪಲ್ಲ ॥ ದೀನ ನಾನು ಧೇನಿಸುವೆನೋ ] ಅಂದಿನ ಕಾಮ । ಧೇನು ನೀನು ದಾನಶೂರನೊ ॥ ದಾನವಲ್ಲಿ ನೀ ದಾನ ಕಾರಣ ದಾನಿ ನಿನ್ನಿಂದ ಹೀನನಾದಾ ದಾನದಿಂದ ] ಇನ್ನೇನು ಫಲವು ದಾನ ಮಾಡೊ ದೀನರೊಡಿಯ ॥ ೧ ॥ ಅಲ್ಪ ನಾನು ಜಲ್ಪ ಕೆಣಿಸುವೆ । ಅನಲ್ಪ ನೀನು ಕಲ್ಪವೃಕ್ಷ ಕಲ್ಪನಲ್ಲವೆ ॥ ಅಲ್ಪರಿಗೆ ಅನಲ್ಪ ಫಲ । ಅಕಲ್ಪಿತಾಗಿ ಕಲ್ಪಿಸುವರೆ । ಅಲ್ಪರಿವರನಲ್ಪರೆಂದು । ಸ್ವಲ್ಪ ಮನೋ ವಿಕಲ್ಪವಿಲ್ಲವೆ ॥ ೨ ॥ ಗುಣಿಯು ನೀನು ಅಣಿಯು ಇಲ್ಲದ ] ಮುಗ್ರುಣಿಯು ನಾನು ಹಣಿಯೊ ನೀನು ಮಣಿಯೋ ಪಾಪದ ] ಧಣಿಯು ಚಿನ್ನದ ಖಣಿಯೆ । ಚಿಂತಾ । ಮಣಿಯೆ ನಿನಗೆ ಅ (ಎ) ಣಿಯು ಇಲ್ಲ । ಗುಣಿ ಅನಂತ ಫಣಿಯ ಗಿರಿಯ ಧಣಿಯ ತೋರಿಸು ದಣಿಯಲಾರೆ ॥ ೩ ॥

## ರಘುನಾಥ ವಿಠಲ

### ೭೭ ಪದ—ರಾಗ—ತೋಡಿ—ತಾಳ—ತ್ರಿವಿಡಿ

ಗುರು ರಾಘವೇಂದ್ರನೆ ಕರುಣಿ ನೋಡಬಾರದೆ । ಮೊರೆ ಯಾರಿಗಿಡಲ್ಯೋ ಕರುಣಾ ಶರಧೆ ॥ ಪಲ್ಲ ॥ ಸ್ಮರಿಸಿದವರ ಪೊರೆವನೆಂಬ ಬಿರುದು

ನಿನ್ನದೆ ವರೆ] ಶರಣರ ಕಲ್ಪ ತರುವೆ ಎನ್ನ್ಯಾಕೆ ಮರೆತೆ ‖ ೧ ‖ ಕರವ ಮುಗಿದು ನಮಿಸಿ ನಿಮಗೆ ಬಾಯಿತೆರವೆ। ಇದು ] ಸರಿ ಯೆನ್ನ ಮನಸು ಲೇಶವಾದರು ಕರಗದೆ ‖ ೨ ‖ ಸತತ ಎನ್ನವ ಗುಣಗಳನು ಮನಕೆ ತಾರದೆ। ನೀ ಬಂದು ] ಪೊರೆಯೊ ರಘುನಾಥ ವಿಠಲನ ಕೃಪೆಯು ಬಾರದೆ ‖ ೩ ‖

## ರಘುನಾಥ ವಿಠಲ

### ೭೮ ಪದ—ರಾಗ—ದೇಶಿ—ತಾಳ ಏಕ

ರೋಗ ಹರನೆ ಕೃಪಾಸಾಗರ ಶ್ರೀ ಗುರು। ರಾಘವೇಂದ್ರ ಪರಿಪಾಲಿಸೋ ‖ ಪಲ್ಲ ‖ ಸಂತತ ದುರ್ಮತ ಧ್ವಾಂತ ದಿವಾಕರ ] ಸಂತ ವಿನುತ ಮತ ಪಾಲಿಸೊ ‖ ೧ ‖ ಪಾವನ ಗಾತ್ರ। ದೇವ ವರನೆ ತವ। ಸೇವಕ ಜನರೊಳಗಾಡಿಸೋ ‖ ೨ ‖ ಘನ್ನ ಮಹಿಮ ರಘುನಾಥ ವಿಠಲ ಪ್ರಿಯಾ। ನಿನ್ನಾರಾಧನೆ ಮಾಡಿಸೊ ‖ ೩ ‖

## ಧನ್ವಂತರಿ ವಿಠಲ

### ೭೯ ಸುಳಾದಿ (೩)—ರಾಗ—ಭೈರವಿ—ಧ್ರುವ ತಾಳ.

ಗುರು ರಾಯ ಮಹಾರಾಯ ಗುಣಪೂರ್ಣ ರಾಘವೇಂದ್ರ ] ಧೊರಿಯೆ ಕಾರುಣ್ಯಾನಿಧಿ ಸುರ ತರುವೆ ] ಮರುತಾವತಾರ. ಮಧ್ವ ಮುನಿಯ ಭಜಕ ಶ್ರೇಷ್ಠ। ಧರೆಯೊಳು ಪಾಮರರನ್ನ ಉದ್ಧರಿವ ಮಹಿಮ। ವರ ಮಣಿ ಕಾಮಧೇನು ಶರಣು ಹೊಕ್ಕವರಿಗೆ। ಪೊರೆದು ವಿಸ್ತರಿಸಿತು ಜಗದಿ ಕೀರ್ತಿ ] ಧರಣಿ ಪಾಲಕ ಶ್ರೀ ಧನ್ವಂತರಿ ವಿಠ್ಠಲ। ಹರಿಯ ಚರಣಧೇನಿಪ ಮಹ ಪರತರ ಯತಿ ಶ್ರೇಷ್ಠ ‖ ೧ ‖

‖ ಮಟ್ಟ ತಾಳ ‖

ಲೋಕ ಜನರಿಗೆಲ್ಲ ನೀ ಕೊಡುವಿಯೊ ವರವ। ನೇಕವಾಗಿ ಮಹ ಸಾಕಾರ ಕರುಣದಲಿ। ವಾಕು ಲಾಲಿಸು ಗುರುವೆ ನಾ ಕೇಳುವೆನಂದು]

ವಿಕ ಬುದ್ಧಿಯ ನಿತ್ತು ಶ್ರೀಕರ ಶ್ರೀಧರನ] ನೇಕವಾಗಿ ತುತಿಪ ನಾಕ ಜನರ ನೇವಿ। ಸೀ ಕರುಣಿಸಿ ನಿತ್ಯ ಸಾಕುವ ದಿನಿತೆಂಬೆ] ಲೋಕ ಪಾಲಕ ಶ್ರೀ ಧನ್ವಂತ್ರಿ ವಿಠ್ಠಲ ನಿನಗೆ ಬೇಕಾದ ಗುಣ ಪ್ರೀಯ[ ಪೂರ್ಣ ] ಗುರು ರಾಘ ವೇಂದ್ರಾರ್ಯ ॥ ೨ ॥

॥ ತ್ರಿವಿಡಿ ತಾಳ ॥

ಸಾಧನವನು ಕಾಣೆ ಈ ಧರೆಯೊಳು ಪೂರ್ಣ। ಬೋಧರಾಯರ ದಿವ್ಯ ಕರುಣಾವೆ ಹೊರ್ತು] ನೀದಯುವನು ಮಾಡೆ ನಿತ್ಯಾನುಗ್ರಹ ಮಾಳ್ಪ] ರಾಪ ಕಾರಣದಿಂದ ನಿಮ್ಮ ದಿವ್ಯ। ಪಾದ ಸೇವಿಯನಿತ್ತು ಪಾವನ್ನ ಮಾಡಿ। ನೋದವೀವುದು ಜಗನ್ಮೋದಿ ಗುರುವೆ। ಮಾಧವ ಮಹ ಮಹಿಮಾಶ್ರೀ ಧನ್ವಂತರಿ ವಿಠಲನ್ನ] ಸಾಧಿಸಿ ಕೊಡುವಂಥ ಸದ್ಗುಣ ರಾಘವೇಂದ್ರ ॥ ೩ ॥

॥ ಅಟ್ಟ ತಾಳ ॥

ಗುರುವೆ ಸದ್ಗುಣ ರನ್ನ ಶರಣು ಹೊಕ್ಕೆನು ನಿನ್ನ। ಪರಿಪಾಲಿಸೊ ಮುನ್ನ ಪರಿತವನುಗ್ರಹವನ್ನ। ಮರೆಯಲಾಗದು ಯಿನ್ನ ಪರ ದಯ ಪರಿಪೂರ್ಣ। ಮೊರೆಹೊಕ್ಕವನನ್ನು ಎರವು ನೋಳ್ಪದೆ ಚನ್ನ। ಹರಿ ಭಕ್ತಾಗ್ರಗಣ್ಯ ವರ ಮಧ್ವ ಮುನಿಯನ್ನ। ಸ್ಥಿರದಿ ಭಜಿಪ ಪೂರ್ಣ ಪರತರ ಗುಣಗಣ। ಪರಿಯ ರಾಘವೇಂದ್ರ ಶರಣ ಕರುಣಾಬ್ಧಿ ವರಪ್ರದ ಶ್ರೀ ಧನ್ವಂತರಿ ವಿಠಲನ್ನ ನಿಜ ದಾಸ। ಶಿರೋ ಮಣಿಯೆ ನಮೊ ಧೊರೆಯೆ ಶಾಶ್ವಿತ ಫಲದ ॥ ೪ ॥

॥ ಆದಿ ತಾಳ ॥

ವರ ಪ್ರಹಲ್ಲಾದ ನವತಾರ ವ್ಯಾಸಮುನಿವರ್ಯ। ದೆರಡನೆ ಅವತಾರ ವರಯೋಗಿ ಜನಿಸಿ । ಧರೆಯೊಳು ವಿಸ್ತರಿಸಿ ಮಹಿಮೆ ತೋರಿ ಉ] ದ್ಧರಿಸಿ ಸಜ್ಜನರನ್ನು ಮೆರದು ಪರಮ ಸುಖ। ತ್ವರಿತದಿ ತೋರಿಕೊಟ್ಟು ಗುರುವರ

ಗುಣವರ್ಯ । ಸುರಮುನಿ ರಾಘವೇಂದ್ರ । ನರನ ಸಾರಥಿ ಶ್ರೀ ಧನ್ವಂತ್ರಿ ವಿಠಲನ್ನ । ಕರುಣ ನೀಕ್ಷಿಸಿ ತಕ್ಷಣದಿ ಉದ್ಧರಿಸುವ ॥ ೫ ॥

॥ ಜತ್ತೆ ॥

ಆನಂದ ಮುನಿಯಿಂದ ವಂದ್ಯ ಶ್ರೀ । ಧನ್ವಂತ್ರಿ ವಿಠಲಗೆ ನಮಿಸುವ ರಾಘವೇಂದ್ರ ಗುರುವೆ ನಮೋ ನಮೊ ॥ ೬ ॥

## ಕನಕಾದ್ರಿ ವಿಠಲ

### ೮೦ ಸುಳಾದಿ (೪) ಧ್ರುವತಾಳ

ಶ್ರೀಮದ್ರಾಘವೇಂದ್ರಾರ್ಯ ಮಹ ಯೋಗೀಶ್ವರರ ಪ್ರೀತ । ಶ್ರೀಮದ್ರಾಘವ । ವ್ಯಾನ ಸಂಕರುಷಣ ಮೂರ್ತಿ । ಭೂಮಿ ಪೊತ್ತಿಹ ಶೇಷ ಪ್ರಹ್ಲಾದ ಪ್ರತೀಯಲ್ಲಿ ನರಸಿಂಹನಾಗಿಪೊಲಿದು । ನೇಮದಿ ದ್ವಿತಿಯ ಯುಗದಿ ರಾಮನ ತಮ್ಮನೆನಸಿ ದ್ವಾಪರದಲ್ಲಿ । ನೀಮರಿಯಾದಿ ತೋರಿ ಬಲರಾಮನೆಂದು ಕೃಷ್ಣ । ಭೂಮಿಯೊಳು ಕಲಿಯುಗದಿ ವ್ಯಾಸರೂಪ ರಾಘವೇಂದ್ರರೆಂಬ । ಅಮೋಘ ಜ್ಞಾನವನ್ನು ಜ್ಞಾನಿಗಳಿಂದ ತಿಳಿದಿ ಈ । ಭೂಮಿ ಸುರರ ಕಾಯ್ದ ರಾಮ ಭಜಕ ಹನುಮ । ಭೀಮನೆ ಮಧ್ವಾಚಾರ್ಯ ಮಹಾ ಮುನಿಗಳ ವಂಶದಿ । ಸ್ವಾಮಿಗಳೆನಿಸುತ್ತ ಈ ಮಹಾಧಿಷ್ಠಾನದಲ್ಲಿ । ಸ್ವಾಮಿ ನಿಮ್ಮರಿದೇನೆಂದು ಸುಮಹ ವೃಂದಾವನದ । ಆ ಮೂಲಾಗ್ರದಲ್ಲಿ ಅಣು ಮಹದ್ರೂಪಾನಂತ ವಿಶ್ವದಾಸ್ಯ ಕೂಡಿ । ಶ್ರೀ ಮಹಲಕ್ಷ್ಮೀಕಾಂತ ತುರ್ಯ ಶಿರದ ಮೇಲೆ । ರಾಮ ವಿಶ್ವಾದಿ ಸುರರು ತೆನೆ ಕಂಕಣದಿ ಋಷಿಗಳು । ಆ ಮಹಾ ಹೃದ್ದೇಶದಿ ಪಿತ್ರಾದಿಗಳು ಈ ನೇಮದಿ ಕೆಳಕಂಕಣದಿ ಗಂಧರ್ವರು । ಈ ಮೂಡಗಳಲ್ಲಿ ಕ್ಷಿತಿಪರು ಪೀಠಾದಲ್ಲಿ । ಸ್ವಾಮಿ ಕಮಲನಾಭಾದಿ ಯತಿಗಳು । ಸಾಮಸ್ತ ದಾಸರಿಹರು ವೇದಿಕದಿ ಪ್ರಾಕಾರದಲ್ಲಿ । ಭೂಮಿ ಸುರರು ಅಂಗಳದಿ । ಶೀಮೆ ರಾಯರು ಅನೇಕ ಶಾಖಸ್ಥ । ರೋಮಾಂಚನರಾಗಿ ಕೈ ಎತ್ತಿ ತುತಿಪರೊ । ಶ್ರೀಮಂತ ಗುರು ರಾಘವೇಂದ್ರಂ

ತರ್ಯಾಮಿ । ಶ್ರೀಮಂತ ಕನಕಾದ್ರಿ ವಿಠಲ । ನೀ ಮರೆಯುವೆ ಜ್ಞಾನ ಶುದ್ಧಿಯ । ನೀಯೊ ॥ ೧ ॥

॥ ಮಟ್ಟೆ ತಾಳ ॥

ಒಂದು ಯುಗದಲ್ಲಿ ನಾರಸಿಂಹ ಗಿರಿಯಲ್ಲಿ । ಬಂದು ಪೋಗುತಿರಲು ನಾರದ ಮುನಿ ಆಗ ] ವಂದಿಸಿ ಕೇಳಿದನು ಪ್ರಹಲ್ಲಾದ ಪರಿಯ ಚರಿಯ । ಮುಂದೆ ಆಗುವದೆಲ್ಲ ತಿಳಿಸಿ ತಾವಿಬ್ಬರು । ಬಂದುಪಸಿದರು ದಕ್ಷಣ ಉತ್ತರ ದಲ್ಲಿ ] ಅಂದಿನ ಕುರುಹುಗಳು ತೀದು ಆನೆ ] ಗುಂದಿಸ್ಥಳದಲ್ಲಿ ಪೊರೆದ ವ್ಯಾಸಮುನಿಯು ರಾಘ । ವೇಂದ್ರ ರಿಂಬಿೂ ರೂಪದಲ್ಲಿ ] ತಂದೆ ಶ್ರೀ ಕನಕಾದ್ರಿ ವಿಠಲನ ಚರಣಾಬ್ಜಾ । ದ್ವಂದ್ವ ಕರುಣ ಪಾತ್ರರಾಗಿ ಬಾಳಿದ ರಯ್ಯ ॥ ೨ ॥

॥ ರೂಪಕ ತಾಳ ॥

ಇವರ ಸಂದರುಶನ ಗೋಕುಲ ಕಂಡಂತೆ । ಇವರ ಪ್ರದಕ್ಷಿಣೆ ಭೂ ಪ್ರದಕ್ಷಿಣೆ । ಇವರಿಗೆ ಅಭಿಷೇಕ । ಗಂಗಾಸ್ನಾನ ಇವರ ಕೈಮುಗ್ರೆ ನಾವು ಗಂಧಾಕ್ಷತೆ ಕುಸುಮ ] ಇವರ ವಸನಲಂಕಾರ ಅನಂತನ ಘನಸೇವೆ । ಇವ ರಿಗೆ ಧೂಪಾರ್ತಿ ಅಜ್ಞಾನ ಪರಿಹಾರ ] ಇವರಿಗೆ ಏಕಾರ್ತಿ ಸರ್ವತ್ರ ಹರಿ ಮೂರ್ತಿ। ಇವರಿಗೆ ನೈವೇದ್ಯ ಅನಂತ ಯಜ್ಞಫಲ। ಇವರ ಹಸ್ತ ಪ್ರಕ್ಷಾಲನೆ ಸುಬ್ರಹ್ಮಣ್ಯಕೆಸರಿ । ಇವರಿಗೆ ಮಂಗಳಾರುತಿ ತಾಂಬೂಲ ದಕ್ಷಣವು ] ಇವರ ಮಂತ್ರಾಕ್ಷತಿ ಫಲ ಕೈವಲ್ಯವು ] ಇವರ ಅಂತರ್ಯಾಮಿ ರಘುಪತ್ರಿ ಕನಕಾದ್ರಿ ವಿಠಲ ನಿರಂತರ। ವಿವರಿಸಿ ಕೈಕೊಂಡು ಯಿವರಿಂದಲಿ ಕೊಡುವ ॥ ೩ ॥

॥ ಝುಂಪಿ ತಾಳ ॥

ಕೃದ್ಧೋಲ್ಕ ಚಕ್ರದಲಿ ಪೃಥ್ವಿ ವೃತ್ತಿಕೆಯಲಿ । ಶುದ್ಧ ಪಾದೋದ ಕದಿ ಅಮ್ಮಯ ಮಹೋಲ್ಕ ಶಂಖವಧಿಪತಿ, ನೋಡು । ಸಿದ್ಧಾಂತ ವಿತರ್ಕ

ಗದೆ ಮಂಗಳಾರ್ತಿಯಲಿ। ಇದ್ದು ಹೊಳೆವನು ಇದೆ ಸ್ಥಾನದಲಿ ಭಾರ್ಗವನು। ಪದ್ಮ ಉಚ್ಚಾಟನ ಮಂತ್ರದಲಿ ವಾಯುದ್ವಿಲ್ಕ। ಮುದ್ರಿ ನಾರಾಯಣದಿ ಸಹಸ್ರೋಲ್ಕ ಆಕಾಶ। ಕೈದ್ದು ಕುಣಿದಾಡಿದ್ದೈ ರೋಗ ಭವ ಭೀತಿ ತತ್ಸುಖದಿ। ಪದ್ಮ ಪತಿ ರಾಘವನು ಕನಕಾದ್ರಿ ವಿಠಲೇಶ। ಸಿದ್ಧ ಸಿದ್ಧ ಈ ದಿವ್ಯ ಸಿದ್ಧ ಪ್ರಸಾದದಲ್ಲಿ ॥ ೪ ॥

॥ ತ್ರಿವಿಡಿ ತಾಳ ॥

ಸಿರಿ ರಾಘವೇಂದ್ರಾರ್ಯರ ದಿವ್ಯ ವಿಗ್ರಹವ। ನೆರೆ ಪೂರೈಸಿ ತುತಿ ಪದು ತಿಳಿದು ತಿಳಿಸಿದಂತೆ। ವಾರಿಜಾಸನದಲ್ಲಿ ಕುಳಿತು ತೋರುವ ವಿಶಾಲ ಯದಿ। ಉರವ ( ಮೆರೆವ ) ಮುಖ ಆಜಾನು ಬಾಹು। ನೆರೆ ನಗುತಾ ಲಿದ್ದು ತಪಗೈವ ಮುನಿಯಂತೆ। ತೋರಿ ದಕ್ಷಣಹಸ್ತ ಜಪಮಾಲೆ ದೃಢ ವಾಗಿ। ನೇರಿಸಿಹ್ಯರು ಎಡದ ಜಾನು ಮೂಲಿಯಲ್ಲಿ ] ಸಿರಿ ಮುದ್ರಿ ದ್ವಾದಶ ನಾಮ ಧರಿಸಿ ತುಲಸಿ ] ಮೆರವ ಕಮಲಾಕ್ಷಿ ಅಕ್ಷತಿ ಧಾಳ ಅಂಗಾರ ಶ್ರಿಂ ಗಾರ ] ಭರದಿ ಉಡುವ ಕೌಪಿನ ವಸನ ದಂಡ ಕಮಂಡಲ ಎಡಬಲ ಈ। ಪರಿ ತೋರಿ ಶಿಷ್ಯರಿಗೆ ಹರಿ ಸರ್ವೋತ್ತಮನೆಂದು। ನೆರೆ ಸಿದ್ಧಾಂತ ಶ್ರೀ ಮಧ್ವಾಚಾರ್ಯರ ವಚನ ] ಪರಿಪೂರೈಸಿ ತಿಳಿದು ಸದ್ಗ್ರಂಥ ನಿರ್ಮಿಸಿ ತಾವು। ಕರಗಳ ಮುಗಿದು ತುಯರ್ಾ ಎಮ್ಮೋಲಗೆಂದು। ಕುರಿತು ವಂ ದಿಸಿ ನ್ಯಾಸ ಪೂರ್ವಕ ಹಂಸನ್ನ ] ಕರುಣಾ ಪಡೆದು ಸುಖವನಿಪ್ಪ। ಗುರು ರಾಘವೇಂದ್ರರ ಈ ರೀತಿ ಯಲಿ ನೀನು। ಅರಿತು ಅಷ್ಟಾಕ್ಷರ ಮಂತ್ರ ಜಪಿಸೊ। ಓಂ ರಾಘವೆಂದ್ರಾಯನಮಃ ಎಂಬಂತೆ। ನೂರೆಂಟು ಜಪಗೈದು ಅರ್ಘ್ಯ ದಶವನಿತ್ತು ] ಸಿರಿ ರಾಮಚಂದ್ರ ಪ್ರೀತೊ ಭವತೆಂದು। ವಾರಿಧಾರಿಯನೀಯೆ ಕನಕಾದ್ರಿ ವಿಠಲನು ] ಪೊರೆಯುತಲಿಹ ರಾಘ ವೇಂದ್ರರ ವೊಳಗಿದ್ದು ॥ ೫ ॥

॥ ಅಟ್ಟತಾಳ ॥

ಬಂದು ವೃಂದಾವನ ಕಂಡರೆ ಫಲ ಉಂಟು। ಮಂದಿರದಲ್ಲಿ ದಿನ ಒಂದೇ ಭಕುತಿಯಲ್ಲಿ] ವೃಂದಾವನ ಮಾಡಿ ಬರೆದು ಪೂಜಿಸಲಿನ್ನು]

ತಂವೆ ಶ್ರೀ ರಾಘವೇಂದ್ರ ವೊಳದು ನಮ್ಮ। ದಂಮುಗಿ ಕಳೆದು ಧನವು ಆಯು ಸಂತಾನ। ಮುಂದಿನ ಗತಿಗೂ ಶ್ರೀ ಹರಿಧ್ಯಾನ ಬಲವಿತ್ತ। ಹಿಂದೆ ಮುಕುತಿ ಕೊಟ್ಟ ಪತಿತಗೆ ದಯಮಾಡಿ। ಛಂದಾಗಿ ನೃಪಗೆ ಅನ್ನವ ನಿತ್ತಾಂಬರದಲ್ಲಿ। ತಂದು ತೋರಿದ ರತ್ನದ ಸರ ಅಗ್ನಿಕುಂಡದಿ। ನೊಂದು ಬಿಸಲೊಳು ಬರುವ ವಿಪ್ರರ ಕಾಯ್ದು। ಅಂದದಿ ಹಡಿಯಲು ಜಲತೋರಿ ಪಥದಲ್ಲಿ। ಸಂದೇಹವಿಲ್ಲದೆ ಮಾವಿನ ಹಣ್ಣಿನ ರಸ। ದಿಂದ ಕೂಸಿನ ತೋರಿ ಗಂಥ ವಾಹನ। ನಿಂದಾಯು (ಮ) ತಿ ವಾರ್ತೆ? ನೈವೇದ್ಯ।ದಂಡಾದಿ ಜನರಿಗೆ ತೋರಿ ಶುಚಿಯ ಮಾಡಿ। ಅಂದಿಂದು ಮುಂದೆ ಸಹಿತಯಿವೆ ಗುರುಗಳು। ನಿಂಮ ಕಾಯ್ವರು ನಮ್ಮ ಹೃದಯ ಮಂದಿರದಿದ್ದು। ಕಂದರ್ಪ ಜನಕ ಶ್ರೀ ಕನಕಾದ್ರಿ ವಿಠಲನ್ನಾ। ನಂದ ಕ್ರಮ ಸುರದ್ರುಮ ವೊಂದಿದ್ಯೆತಿವರರು ॥ ೬ ॥

॥ ಆದಿ ತಾಳ ॥

ಸಂತಾನ ಸಂಪದ ಆಯು ವಿದ್ಯಜ್ಞಾನ। ಇಂತು ಕೃಷ್ಣನು ರಾಮ ಧನ್ವಂತ್ರಿ ಹಯಗ್ರೀವ। ಎಂಥ ವಾಯು ಭೂತ ಬಿಡಿಸುವ ನರಸಿಂಹ। ಸಂತತ ಹನುಮನು ಶ್ರವಣದಿ ಯಿರುತಿಪ್ಪ। ಕುಂತಿ ಸುತನು ಪೂರ್ಣ ಬಲವನ್ನು ಕೊಡುವನು। ಗ್ರಂಥ ಪಾಠದಿ ಮಧ್ವಾಚಾರ್ಯರ ಕರುಣವು। ಪಂಥವಾಡದೆ ಪರಶಾಖೆ ಮತಸ್ಥರು। ನಿಂತು ಕೈಮುಗಿಯುವರು ಸರ್ವ ಜನರು ನೋಡಿ। ಮುಂತೆ ಆಗುವುದಕ್ಕೆ ಪತ್ರವ ಬರೆಸಿಟ್ಟು। ಸಂತಾನ ತೋರಿದರು ರಾಘವೇಂದ್ರ ನರಸಿಂಹ। ಕಂತು ಜನಕ ನಮ್ಮ ಕನಕಾದ್ರಿ ವಿಠಲೇಶ। ಎಂತು ಮನಕೆ ಬಂದಂತೆ ಚರಿಪರೊ ॥ ೭ ॥

॥ ಜತೆ ॥

ವಂದೇ ವೃಂದಾವನದಿ ಉಭಯ ಮೂರುತಿ ಕಂಡೆ। ತಂದೆ ಕನಕಾದ್ರಿ ವಿಠಲನ್ನ ಕರುಣದಿ ॥ ೮ ॥

## ಶ್ರೀ ಗುರು ಜಗನ್ನಾಥ ವಿಠಲ

### ೮೧ ಪದ—ರಾಗ—ಭೂಪಾಳಿ—ತಾಳ ಝಂಪೆ

ಏಳಯ್ಯ ಗುರುವೆ ಬೆಳಗಾಯಿತು । ಏಳಯ್ಯ ಗುರುರಾಯ ಏಳಯ್ಯ ಶುಭಕಾಯ । ಏಳು ಮಹಾರಾಯ ಏಳು ಎನ ಜೀಯಾ ॥ ಪಲ್ಲ ॥ ಶಿಲೀ ನಿನ ಭಕ್ತರು ಸಾಲು ಸಾಲಾಗಿ ನಿಂತಿಹ್ಯರು ॥ ಉಪ. ಪಲ್ಲ ॥ ಉದಯಾದ್ರಿ ಶೃಂಗದಲಿ ಉದಿಸಿದನು ಭಾಸ್ಕರನು ] ಸದಮಲ ಬುಧರೆಲ್ಲ ಮುದದಿಂದಲೆದ್ದು । ನದಿಯು ಸ್ನಾನವ ಮಾಡಿ ಉದಕ ಪುಷ್ಪಗಳಿಂದ । ಸದನಕ್ಕೆ ತಾವ್ ಬಂದು । ಪದುಮನಾಭನ ಭಜಿಸಿ । ಪಾ ] ದೋದಕವನೆ ಧರಿಸಿ ] ಸದೆಯ ನಿನ ಪಾದ ಸಂದರುಶನಕೆ ಬಂದಿಹ್ಯರೊ ॥ ೧ ॥ ನಿತ್ಯ ಭಜಿಸುವ ಜನರೆಲ್ಲ ಹೊತ್ತು ಮೀರಿತು ಎಂದು । ಚಿತ್ತ ಶುದ್ಧಿಯಲಿಂದ । ಉತ್ತುಮಾ ( ಆರಥಣಗಳು ) ಅರ್ಪಣಗಳು ತಮ್ಮ ನೆತ್ತಿಯಿಂಪೊತ್ತು ] ಸುತ್ತು ಸಂದಣಿಯಿಂದ । ಜತ್ತಾಗಿ ನಿಂತಿಹ್ಯರು ] ಉತ್ತುಮಾನಿನ ನಿದ್ರಿ ಹೊತ್ತು ಮೀರ್‍ಯಾಯ್ತು ] ತೊತ್ತಿಗರೆಲ್ಲರು ಪಾದ ] ಪತ್ತಿ ಬೋಧಿಸುವರು। ಚಿತ್ತಕ್ಕೆ ತಂದು ತ್ವರಿತದಿ ಏಳು ॥ ೨ ॥ ವಿಮತಾದ್ರಿ ಕುಲಿಶನೇ ವಿಮಲ ಗಾತ್ರನೆ ಏಳು । ನಮಿಪ ಜನರಾರ್ಥದಾತ ದಿವಿಜದ್ರುಮನೆ ] ಪ್ರೇಮ ವಾರುಧಿ ಏಳು । ತಾಮರಸಾಂಬಕನೆ ಏಳು ] ಶ್ರೀರಾಮ ಪಾದ ಭೃಂಗನೆ ಏಳು । ಗೋಮತಿ ಕುಮುದ । ಸೋಮಸಾಂದ್ರನೆ ಏಳು ] ಯಾಮ ಮೀರಿತು ಪಿಶ್ವನಿಯಾಮಕ ದೂತನೇ । ನಾಮ ಗಾಯನ ಲೋಲ ರಮಾ ವಲ್ಲಭನ ಪ್ರಿಯ ಗುರು ರಾಜವರ್ಯ ॥ ೩ ॥ ಮೌನಿ ಕುಲರನ್ನ ಮಾನನಿಧಿಯೇ ಎನ್ನ । ಬಿನ್ನಪವ ಕೇಳಯ್ಯ ಜೀಯ್ಯಾ । ನಿನ್ನ ಬೋಧಿಪ ಕನ್ಯಜನರುಂಟ । ನಿನ್ನಿಂದ ನೀನು ಚನ್ನಾಗಿ ಏಳು । ಮುನ್ನ ಮಹಾ ಕಾರ್ಯಂಗಳು ಘನ್ನವಾಗಿರುತಿಹ್ಯವು । ಎನ್ನ ನುಡಿ ಈಗ ಚನ್ನಾಗಿ ಮನದಿ ತಂದು] ಮನ್ನಿಸಿ ಪೊರೆಯೋ ಧೊರೆಯೆ ॥ ೪ ॥ ದಾತ ಈ ಜನ ಜಾತಿ ಸಾಕಲಾರದೆ । ನೋತು ಮಲಗಿದೆಯಾ । ಪಾತಕಾಂಬುಧಿ ಪೋತನೇ । ಮಾತರಿಶ್ವನ ತಾತ ಸೀತಾನಾಥನ ಪಾದ । ಪಾಥ ಭವ ಯುಗ್ಮದಲಿ ಸಂ ] ಜಾತ

ವಾಗಿಹ್ಯ ಸುಧಾ | ಪೀತ ಕಾರಣ ಮದಸಂಭೂತದಿಂ ಮಲಗಿದೆಯೊ | ಪೂತನಾಘನೆ * **ಗುರು ಜಗನ್ನಾಥ ವಿಠ್ಠಲನ** | ದೂತ ನಾನೆಂಬ ಗುರು ವಿಂದ ಮಲಗಿದೆಯಾ || ೫ ||

---

* ಗುರು ಜಗನ್ನಾಥ ವಿಠ್ಠಲ — ಇವರು ಕೋಸಿಗಿ ಆಚಾರ್ಯ ರೆಂದು ಸುಪ್ರಸಿದ್ಧರು. ಚಿಕ್ಕ ವಯಸ್ಸಿನಲ್ಲಿ ಬರೆಹೋದಿವವರಲ್ಲ. ಇವರ ತಂದೆಗಳು ಮಹಾ ವಿದ್ವನ್ಮಣಿಗಳಾದರೂ ಏಕ ಪುತ್ರ ವಿಷಯ ಬಹು ಪ್ರೀತಿ ಯಿಂದ ಸಾಕಿ ಸಲಹಿದರು. ಚಿಕ್ಕ ವಯಸ್ಸಿನಲ್ಲಿ ಬಹು ಉಡಾಳರಾದರು ಮಾಡುವುದೇನೆಂದು ತಂದೆಗಳು ಶ್ರೀ ಗುರು ರಾಜರನ್ನು ಪ್ರಾರ್ಥಿಸಿದರು. ಶ್ರೀ ಗುರು ಮಂತ್ರಾಲಯ ಪ್ರಭುಗಳು ಶ್ರಾವಣ ಮಾಸ ವರಮಹಾಲಕ್ಷ್ಮಿ ವ್ರತ ದಿವಸ ಇವರ ಮನೆಗೆ ಬಂದು ತೇಜೋರೂಪದಿಂದ ಸಂದರುಶನ ವಿತ್ತರು. ರಾತ್ರಿ ಅವರ ಸ್ವಪ್ನದಲ್ಲಿ ಅಜ್ಞೆಯಾದಂತೆ ಮಾರನೇ ದಿನ ಭಾಗ ವತ ಹೇಳಲಿಕ್ಕೆ ಪ್ರಾರಂಭಿಸಿದರು. ಶ್ರೀ ಗುರುರಾಜರು ಈ ರೀತಿ ಅನು ಗ್ರಹಿಸಲು ಕೆಲವು ದಿನಗಳಲ್ಲಿಯೇ ಪಂಡಿತ ಶ್ರೇಷ್ಠರಾಗಿ ಲೋಕದಲ್ಲಿ ಸುಪ್ರಖ್ಯಾತರಾದರು. ಶ್ರೀ ಗುರು ರಾಜರ ಅನುಗ್ರಹದಿಂದಲೇ ಶ್ರೀ ಗೋಪಾಲದಾಸರ ಪರಂಪರ ಬಂದ ಅಪರೋಕ್ಷ ಜ್ಞಾನಿಗಳಾದ ಶ್ರೀ ಕೃಷ್ಣ ದಾಸರು ( ಪೆತ್ತ ತಂದೆ ಗುರು ಗೋಪಾಲ) ವಿಠಲ ಇವರಲ್ಲಿ " ಗುರು ಜಗ ನ್ನಾಥ ವಿಠಲ " ರೆಂಬ ಅಂಕಿತ ಪಡೆದು ಅಪರೋಕ್ಷಿಗಳಾದರು. ಶ್ರೀ ಗುರು ರಾಜರು, ಇವರಿಗೆ ಹಿಂದಿನಂತೆ ಯಾವಾಗಲೂ ಸಂದರುಶನ ವಿತ್ತು ಸದ್ಭಕ್ತರನ್ನು ಉದ್ಧಾರ ಮಾಡಿದರು. ಅಪರೋಕ್ಷ ಜ್ಞಾನಿಗಳು ಮತ್ತು ಅನೇಕ ಮಹಾ ಮಹಿಮೆ ತೋರಿ ಇವರು ಶ್ರೀ ಗುರುರಾಜರ ಅನೇಕ ಪದಗಳನ್ನು ಇತರ ನೂರಾರು ಪದಗಳನ್ನೂ ಶ್ರೀ ರಾಘವೇಂದ್ರ ವಿಜಯ (೭) ಸಂಧಿ ರಚಿಸಿರುವರು. ಅಲ್ಲದೆ ಸಂಸ್ಕೃತದಲ್ಲಿ:—

೧. ಭಾಷ್ಯಾರ್ಥ ಸಂಗ್ರಹ. ೨. ಬ್ರಹ್ಮಸೂತ್ರ ರಹಸ್ಯಾರ್ಥ. ೩. ಬ್ರಹ್ಮಸೂತ್ರ ಅಧ್ಯಾತ್ಮ ಅರ್ಥ ಅನಿರುದ್ಧಾದಿ ಪಂಚ ಭಗದ್ರೂಪ ಪರ ವಾಗಿ. ೪. ಪರಾಪರ ತತ್ವ ದೀಪಿಕಾ. ೫. ಪ್ರಾತಃ ಸಂಕಲ್ಪ

## ೮೨. ಸುಳಾದಿ [ ೫ ] ರಾಗ—ನಾಟಿ—ಧ್ರುವ ತಾಳ.

ಆದಿ ಯುಗದಲ್ಲಿ ಮಹ ಆದಿತೇಯ ನೊಬ್ಬ ] ಮೇದಿನಿಯೊಳ್ ಸ್ವರ್ಣಕಶ್ಯಪು ನಾಮದಿ । ಸಾಧಿಸಿ ಬಂದನು ಅವನಿಗೊಬ್ಬ । ಸೋದರ ಸ್ವರ್ಣಾಂಬಕ ನೆನಿಸಿ । ಮೇದಿನಿ ಚೋರನಾಗಿ ಹತನಾದನು ] ಆದಿ ಶೇಷಾಂಶನು ವಿಷ್ವಕ್ಸೇನ ವಾಯುತನುಜ ತಾ । ನಾದ ಪ್ರಹ್ಲಾದ ಮುಖ್ಯ

---

೬. ಸ್ನಾನ ಸಂಕಲ್ಪ. ೭ ಪ್ರಾಣಾಗ್ನಿ ಹೋತ್ರ ಕಲ್ಪ ೮. ಗೀತಾರ್ಥ ವಿವರಣ ಮತ್ತು ಶ್ರೀ ಶ್ರೀಮಂತ್ರಾಲಯ ಪ್ರಭುಗಳ. ೯. ಶ್ರೀ ರಾಘವೇಂದ್ರ ಕರಾವಲಂಬನ ಸ್ತೋತ್ರ. ೧೦. ಶ್ರೀ ರಾಘವೇಂದ್ರ ದಾರಿದ್ರ ಭಂಜನ ಸ್ತೋತ್ರ. ೧೧. ರಾಘವೇಂದ್ರಾಷ್ಟಕ. ೧೨. ಅಷ್ಟಾಕ್ಷರ ಮಂತ್ರ. ೧೩. ಸರ್ವಕರ್ಮ ಸಮರ್ಪಣ ಸ್ತೋತ್ರ. ೧೪. ಶ್ರೀ ಗುರು ರಾಜ ಆಪಾದ ಮೌಳಿ ಸ್ತೋತ್ರ. (ರಥೋದ್ಧಾತ ವೃತ್ತ) ೧೫. ಶ್ರೀ ರಾಘವೇಂದ್ರ ಮಹಿಮಾ ವರ್ಣನ. [ ಭುಜಂಗ ಪ್ರಯಾತವೃತ್ತ ೧೬. ಶ್ರೀ ರಾಘವೇಂದ್ರಾರ್ಯ ಗೀತಾ. ೧೭. ದಾರಿದ್ರಹರಣ ರಾಘವೇಂದ್ರ ಸ್ತುತಿ. ೧೮. ಶತ್ರುವಿಧ್ವಂಸನ ಸ್ತೋತ್ರ. ೧೯. ಶ್ರೀ ರಾಘವೇಂದ್ರ ಪ್ರಾರ್ಥನ ಮಾಲಾ. ೨೦. ಶ್ರೀ ರಾಘವೇಂದ್ರ ಅಷ್ಟಕಾ. ೨೧. ಸರ್ವಕರ್ಮ ಸಮರ್ಪಣ ವಿಧಿ. ೨೨. ಶ್ರೀ ರಾಘವೇಂದ್ರ ಅಶ್ವಧಾಟೀ ಸ್ತೋತ್ರ ವ್ಯಾಖ್ಯಾನ ಸಹಿತ. ೨೩. ಶ್ರೀ ರಾಘವೇಂದ್ರ ಸಹಸ್ರ ನಾಮಾವಳಿ. ೨೪. ಶ್ರೀ ವರದೇಂದ್ರ ಗುರುಸ್ತೋತ್ರ. ೨೫. ಶ್ರೀ ವರದೇಂದ್ರ ಗುರುರಾಜ ಮಂತ್ರ. ಇನ್ನು ಕೆಲವು ಗ್ರಂಥಗಳನ್ನು ರಚಿಸಿರುವರು. ಇವುಗಳ ಮೇಲಿಂದಲೇ ಇವರು ದೊಡ್ಡ ಜ್ಞಾನಿಗಳು ದೇವಾಂಶರು ಶ್ರೀ ಗುರು ರಾಜರ ಮಹಾ ಭಕ್ತರೆಂದು ತಿಳಿದು ಬರುತ್ತದೆ. ಕಿಂಚಿತ್ತಾದರೂ ಸಂದೇಹವಿಲ್ಲ. ಇವರು ಸುಮಾರು ೮೨ ನೇ ವಯಸ್ಸಿನಲ್ಲಿ ಯಾವ ಉಪದ್ರವವಿಲ್ಲದೆ ಶಕೆ ೧೮೪೦ ರೌದ್ರಿ ಸಂ॥ ಅಶ್ವೀನವದಿ ಪ್ರತಿಪದೆ ಮಧ್ಯಾನ್ಹ ೨ ಗಂಟೆಗೆ ದೂರ ದೇಶದಲ್ಲಿದ್ದ ತಮ್ಮ ಭಕ್ತರಿಗೆ ಅದೇಕಾಲ ಸಂದರುಶನವಿತ್ತು ಪರಲೋಕಕ್ಕೆ ತೆರಳಿದರು.

ಪ್ರಾಣಾವೇಶದಿಂದ। ಸೋದರ ಜೀವಾಂಶ ಅಪಾನಾವಿಷ್ಟ ಸ। ಹ್ಲಾದ ನಾಮಕ ಮಿತ್ರಾಂಹ್ವಯ ಸೂರ್ಯನಾವ ಕ। ಹ್ಲಾದ ವ್ಯಾನಾವೇಶದಿಂದ। ಮೋದದಿ ಸೋಮಾಂಶೋದಾನಾ ಯುಗನು। ಹ್ಲಾದನಾಮಕ ಸಂಭೂತ ನಾದ। ಆದಿ ಗಣಪ ಸಮಾನಾವೇಶದಿಂದ। ಆದ್ದೈವರೀ ದೈತ್ಯನ ಪುತ್ರರೆನಿಸಿ। ಮೇದಿನಿ ಸುರ ರುದ್ಧರಿಸ ಗೋಸುಗ। ಆದಿದೈವ ನಾರಾಯಣನೆ ತಾ ಅ। ನಾದಿ ಕಾರಣ ವಿಶ್ವ ಜನ್ಮಾದಿ ಕಾರಣ। ನಾದ ಸರ್ವಜ್ಞ ಸ್ವತಂತ್ರ ಸುಗುಣ ಪೂರ್ಣ। ವೇದಪುರುಷಾದಿ ತೃಣ ಜಡ ಚೇತನ ಜಗಕೆ। ಆಧಾರ ತಾನೊಬ್ಬ ಹರಿಯೆಂಬೋಜ್ಞಾನವ। ಬೋಧಿಸಿ ಬೊಮ್ಮ ತ್ರಿಪುರಾರಿ ಸುರರು ಹರಿ। ಪಾದ ಸೇವಕರೆಂದನುದಿನ ತಿಳಿದು। ವಾದಾದಿ ವಾದಿಗಳ ಜಯಸಿದರಿವರ। ಪಾದ ಭಜನೆ ಗೈದು ಕರುಣಾ ಪಡೆದು। ಆದಿ ಗುರುಜಗನ್ನಾಥ ವಿಠಲನ್ನ। ಆದರದಿ ಭಜಿಸಿ ಮೋದನೈದಬೇಕು ॥ ೧ ॥

**ರಾಗ—ಕಲ್ಯಾಣ—ಮಟ್ಟತಾಳ**

ಅಸುರರ ಜನ್ಮದಲಿ ಪುಟ್ಟಿದ ಇವರಿಗೆ। ಶ್ವಸನನ ಆವೇಶ ಸುರರಾವೇಶ ಬಲದಿ। ಅಸಮಜ್ಞಾನ ಭಕುತಿ ವಿರಾಗವು। ವಸುಧಿಯ ತಳದಿ ದಿನ ದಿನದಲ್ಲಿ। ಪಸರಿಸಿ ಸೂರ್ಯನ ಪ್ರಭೆಯೆಂದದಲ್ಲಿ। ಮಿಸುಪದಕಿದೇ ಕಾರಣವುಂಟು। ಬಿಸಿ ಜಾಂಬಕ ಹರಿ ಪೇಳಿದ ಇವರಿಗೆ। ಅಸುರೇಶ ಹಿರಣ್ಯಕಶ್ಯಪನಲ್ಲಿ। ಶಿಸು ಭಾವದಿಂದ ಜನಿಸೆ ಪೋಗಿರಿ। ಪುಶಿಯಲ್ಲ ಮತ್ಪಾದ ಬಸರದೆ ನೀವು ಪ್ರಹ್ಲಾದಾ। ದ್ವಸಮ ಮಹಿಮರಾಗಿ ಜನಿಸಿರೆಂದು। ಉಸರಿದ ವಾಕ್ಯವು ಪ್ರಮಾಣ ಸಿದ್ಧ। ವ್ಯಸನದಲ್ಲೈವರು ಹರಿಯಿಂದಲಿ ಮತ್ತೆ। ಬೆನಗೊಂಡರು ಹರಿಯಾ ಅಸುರನ ಪತ್ನಿಯಾ। ಬಸಿರೊಳು ಪುಟ್ಟೋದು। ವಶವಲ್ಲವೋ ಸ್ವಾಮಿ। ಕುಸುಮನಾಭನೆ ನಿನ್ನ ಅಸಮ ಲೋಕದ ಸುಖ। ಎಸಗದು ಎಸಗದು ವಸುಧಿಯ ತಳದಿ ಎಂದಿನ ಕಾಲಕ್ಕು। ಮುಸುಕುವದಜ್ಞಾನ ದುಃಖ ಭವದಲ್ಲಿ। ಕಸವೀಸಿ ಗೊಳುತ ಜ್ಞಾನವ ನೀಗಿ। ಬಿಸಿ ನಿಲಯನೆ ನಿನ್ನ ದರುಶನ ವಿಲ್ಲದೆ। ಅಸು ನಿಲ್ಲುವ ಬಗೆ ಯಾವದು ಪೇಳೊ। ಶಶಿಧರ ವಂದ್ಯ ಗುರು ಜಗನ್ನಾಥ ವಿಠ್ಠಲ ನಮ್ಮ। ವ್ಯಸನವನು ಕಳೆದು ಸುಖವನು ಸಲಿಸೊ ॥ ೨ ॥

**ರಾಗ—ಕಾಂಬೋದಿ—ತ್ರಿವಿಡಿ ತಾಳ.**

ಭಕುತರ ವಾಕ್ಯವ ಲಾಲಿಸಿ ತಾನಾಗ । ಲಕುಮಿರಮಣ ನೀ ಪರಿ ನುಡಿದನು । ವಿಕಳ ಪೊಂದದೆ ನೀವು ತ್ವರಿತದಿ ಧರಿಯೊಳು । ಸಕಲರು ಜನಿಸಲು ಮುಸುಕಪಜ್ಞಾನ । ಲಕುಮಿ ಭೂಮಿಯ ಸಹಿತ ಇರುವೆನು ನಿಮ್ಮೊಳು । ವ್ಯಕುತ ನೆನಿಸಿ ನಿತ್ಯ ಪರಿಪರಿ ಮಹಿಮವ । ಪ್ರಕಟ ಮಾಡುವೆ ಮುಖ್ಯ ಪ್ರಾಣನಿಪ್ಪನು ಸತತ । ಕಕುಲಾತಿ ಯಾಕಿನ್ನು ನಡಿರೆಂದು ಹರಿಯಿಂದ । ಉಕುತ ವಾಕ್ಯದಿಂದ ದಿತಿಜನಲ್ಲಿ । ಸುಕೃತಿಗಳೈವರು ಉದಯವೈದಿದರಾಗ । ಮುಕುತಿ ದಾಯಕ ಗುರು ಜಗನ್ನಾಥ ವಿಠ್ಠಲನೆಂಬ । ಭಕುತಿ ಪೂರ್ವಕ ಜ್ಞಾನ ವೃದ್ಧಿ ಐದಿದರು ॥ ೩ ॥

**ರಾಗ—ಅರಬಿ—ಅಟ್ಟತಾಳ.**

ಪಿರಿಯ ಪ್ರಲ್ಹಾದನ್ನ ಕರೆದು ತೊಡಿಯ ಮ್ಯಾಲೆ । ಇರಿಸಿ ಪ್ರೇಮದಿ ನಿಮ್ಮ ಗುರುವೇನು ಪೇಳ್ಯಾನೆ । ಮರಿಯಾದಿ (ಮರೆಯದೆ) ಎನ ಮುಂದೆ ಅರುಹು ಎನಲು ಬಾಲ । ಕಿರಿನಗೆ ಮುಖದಿಂದ ಹರಿಯೇ ಸರ್ವೋತ್ತಮ । ಹರ ಬೊಮ್ಮ ಮುಖರೆಲ್ಲ ಪರಿವಾರ ಭೂತರು [ವರರು] ಅರಿದಿಪ್ಪೆ ಎನ್ನಯ್ಯಾ ಸರಸಿಜ ಜಾಂಡಕ್ಕೆ । ಅರಸು ತಾನಾಗಿದ್ದು ಇರುವದೀ ಚೇತನ। ತರುವಾದಿ ಜಡಮಯ ಸರ್ವ ಸ್ಥಳದಲ್ಲಿ । ನಿರುತ ವ್ಯಾಪಿಸಿ ಇರುತಿಹ್ಯ ಹರಿಯೆಂದು । ಅರಿತ ಮಾನವನಿಗೆ ದೊರಿವೋನು ನಿಶ್ಚಯ । ಅರಿಯೆಂದು ಪೇಳಿದ ತರುಳನ ನುಡಿಕೇಳಿ । ದುರುಳನು ಕ್ರೋಧದಿ ಭರದಿಂದ ಕಂಭವ । ಕರದಿಂದ ಬಡಿಯಲು ನರ ಮೃಗಾಕಾರದಿ । ಹೊರಗೆ ಬಂದು ದೈತ್ಯನುದರವ ಬಗದು । ಕರುಳ ಕೊರಳೊಳು ಧರಸಿದ ನನು । ಚರಜನ ಪರಿಪಾಲ ಬಿರಿದು ಬೀರಿದ ನಮ್ಮ । ಗುರು ಜಗನ್ನಾಥ ವಿಠ್ಠಲ ರೇಯ । ತನ್ನ । ಶರಣರ ಮರೆಯನು ಧರಿಯೊಳಗೆ ॥ ೪ ॥

॥ ಆದಿ ತಾಳ ॥

ಈ ತೆರ ಪ್ರಹ್ಲಾದ ಹರಿ ಪಾದವ ಭಜಿಸಿ । ಪ್ರೀತಿಯ ಪಡೆದು ಭೂಸುರಗಣಕೆ । ಭೂತಳ ದೊಳಗೆ ಯತಿಗಳ ಕುಲಕೆ । ನಾಥನು ವ್ಯಾಸಮುನಿ

ಯೆನಿಸಿ ಮರಳಿ । ಖ್ಯಾತ ಶ್ರೀ ರಾಘವೇಂದ್ರನೆಂದೆನಿಸಿ । ಪ್ರೀತಿಯಿಂದಲಿ ಭಕ್ತರ ಪೊರಿಯಲ । ನೀತಿ ಭಾವನಲಿ ಯತಿಯಾಶ್ರಮ ಪೊಂದಿ । ಸೀತಾಪತಿ ರಾಮ ಯದುನಾಯಕ ಕೃಷ್ಣ। ಭೀತಿ ಹರ ನರಸಿಂಹ ವ್ಯಾಸರ ಭಜಿಸಿ ದೂತರ ಮನೋರಥ ಪೂರ್ತಿಸಿ ಪೊರೆವರು। ದಾತ ಗುರು ಜಗನ್ನಾಥ ವಿಠ್ಠಲನ್ನ। ನೀತ ವಿಭೂತಿಯ ಪಡೆದು ನಿ। ರ್ಭೀತರಾಗಿಹರು ॥ ೫ ॥

॥ ಜತೆ ॥

ದೂತ ಜನರ ಮಹಾ ಪಾತಕ ಹರರೆನ್ನಿ । ಪ್ರೀತ ಗುರು ಜಗನ್ನಾಥ ವಿಠಲ ನೊಲಿವ ॥ ೬ ॥

## ೮೩ ಪದ—ರಾಗ—ನಾಟಿ—ತ್ರಿವಿಡಿತಾಳ

ಶರಣು ಶ್ರೀ ಗುರು ರಾಘವೇಂದ್ರಗೆ । ಶರಣು ಯತಿಕುಲ ತಿಲಕಗೆ ॥ ಶರಣು ಶರಣರ ಪೊರೆವ ಕರುಣಿಗೆ। ಶರಣು ಹರಿಗುಣ ಲೋಲಗೆ ॥ ಪಲ್ಲ ॥ ಮಧ್ವಮತ ಶುಭಪಾರ್ಧಿ ಚಂದ್ರಗೆ। ಸಿದ್ಧ ಸಾಧನ ಮೂರ್ತಿಗೆ ಬದ್ಧ ಶ್ರೀಹರಿ ದ್ವೇಷಿ ಮಾಯ್ಗಳ ಗೆದ್ದ ರಘುಕುಲ ರಾಮದೂತಗೆ ॥ ೧ ॥ ನಿತ್ಯ ನಿರ್ಮಲ ಪುಣ್ಯಗಾತ್ರಗೆ। ಭೃತ್ಯಪಾಲಕ ಸುಗುಣ ಪಾತ್ರಗೆ। ಸತ್ಯ ಜ್ಞಾನ ಸುಮೋದ ನೇತ್ರಗೆ ಸ್ತುತ್ಯ ಯತಿವರ ಸುಗುಣ (ಜನ) ಮಿತ್ರಗೆ ॥ ೨ ॥ ಮೋದ ದಾಯಕ ಭೇದ ಸಾಧಕ। ಮೇದಿನೀ ಸುರ ಜಾಲ ನಾಯಕ। ಮೋದ ತೀರ್ಥರ ಚರಣ ಸೇವಕ। ಆದಿ ಗುರು ಜಗನ್ನಾಥ ವಿಠಲಗೆ ॥ ೩ ॥

## ೮೪ ಪದ—ರಾಗ—ಅಸಾವೇರಿ—ಆದಿತಾಳ.

ರಾಯರ ನೋಡಿರೈ ಶುಭತನು ಕಾಯರ ಪಾಡಿರೈ ॥ ಪ ॥ ತೋಯಜಪತಿ ನಾರಾಯಣ ಪದಯುಗ । ಭೃಂಗಾ ಭಕ್ತ ಕೃಪಾಂಗ ॥ಉಪ ಪಲ್ಲ॥ ಸುಂದರ ಮುಖ ಅರವಿಂದಲೋಚನ ಘ್ರಾಣ । ಕುಂದ ಕುಟ್ಮಲಸಮ । ರದನ । ರಾಜಿತ ವದನ । ಮಂದಸ್ಮಿತ ಯುತ। ದ್ವಂದ್ವ ಓಷ್ಟ, ಪ್ರತಿಛಂದವಾಗಿಹ ಚುಬುಕಾ। ಫಾಲಾದಿ ತಿಲುಕಾ। ಕಂಧರಯುತ ಪುರಂದರ

ಕರಿಕರ । ಛಂದವಾಗಿಹಬಾಹುಯುಗಳಾ ಮಾಲಾಂಕಿತ ಕೊರಳ । ಇಂದಿರ ಪತಿ ನಿಜ ಮಂದಿರ ವೆನೆಸುವ । ಸುಂದರ ಹೃದಯದಿ ನಾಮಾ ಹಚ್ಚಿಹ ಪ್ರೇಮ ॥ ೧ ॥ ಹಸ್ತದಿ ರಾಜಿಪ ಪುಸ್ತಕ ಮಣಿ ಮಾಲೆ । ಸ್ವಸ್ಥಿಶಾಸನ ಸ್ಥಿತ ಮೋದ । ಕೃತ ವಿನೋದ ॥ ಮಸ್ತಕದಿಂದಲಿ ವಿಸ್ತೃತ ಕಾಷಾಯ ವಸ್ತ್ರದಿ ಶೋಭಿಪ ಗಾತ್ರ । ಶುಭ ಚಾರಿತ್ರ । ಸ್ವಸ್ಥ ಮನದಿ ಪ್ರಾಶಸ್ಥ ಹರಿಯ ಪಾದ । ಸ್ವಸ್ತಿಕ ಯುಗಳ ಧ್ಯಾನ ಮಾಡುವ ಜ್ಞಾನ । ಧ್ವಸ್ತ ದೋಷ ಸಮಸ್ತ ಜಗತ್ತಿಗೆ । ಸ್ವಸ್ಥಿದ ನೆನಿಸಿದ ಭೂಪಾ । ಭವ್ಯ ಪ್ರತಾಪ ॥ ೨ ॥ ಕುಟಿಲ ವಿಮತರ ಪಟಲಾಂಧ ಕಾರಕೆ । ಪಟುತರ ದಿನಮಣಿ ರೂಪ । ನಿಜಜನ ಸುರಪ । ಸ್ಫುಟ ಮೋದ ತೀರ್ಥರ ಸ್ಫಟಿಕ ಜಲಧಿ ಯೊಳು । ಸ್ಫುಟಿತಹಾಟಕ ಚಂದ್ರ ಸದ್ಗುಣ ಸಾಂದ್ರ । ಶಠಮಾತ್ಸರ ಬಹು ಹಟದಿ ಶಿಕ್ಷಿಸುವ । ಚಟುಲ ಜನರ ಪರಿಪಾಲ । ಕರುಣ ವಿಶಾಲ । ಕಿಟರದ ಭವನದಿ ತಟಕೃತ ಮಂದಿರ । ಧಿಟ ಗುರು-ಜಗನ್ನಾಥಾ । ವಿಠ್ಠಲ ದೂತ ॥ ೩ ॥

**೭೫ ಪದ—ರಾಗ—ಜಂಜೂಟಿ—ತಾಳ ಏಕ.**

ಗುರುರಾಯ ನೀನೆ ಧೊರಿ ಧೊರಿ । ಧಣಿ ಧಣಿ ಗುರು ರಾಯ ನೀನೆ ॥ ಪಲ್ಲ ॥ ಪರಮ ಭಾಗವತರ ಮರಿಯದೆ ಪೊರೆವಂಥ ॥ ಉ. ಪ॥ ಆದಿ ಯುಗದಿ ಪ್ರಹ್ಲಾದ ರಾಯನೆನಿಸಿ । ಮಾಧವನುತ್ತಮನೆಂದು ಸಾಧಿಸಿ ದಂಥ ॥ ೧ ॥ ತ್ರೃತ ಯುಗದಿ ಮತ್ತು ಜಾತಲಕ್ಷ್ಮಣನಾಗಿ । ಪ್ರೀತಿ ಯಿಂದಲಿ ರಘುನಾಥದ ಭಜಿಸಿದಂಥ ॥ ೨ ॥ ದ್ವಾಪರಯುಗದಲ್ಲಿ ಭೂಪ ಬಾಲ್ಹಿಕನಾಗಿ । ಶ್ರೀಪತಿ ಕೃಷ್ಣಪದ । ಈ ಪರಿ ಭಜಿಸಿದಂಥ ॥ ೩ ॥ ಕಲಿಯುಗದಿ ಮತ್ತೆ ಚಲುವ ವ್ಯಾಸಮುನಿ ಯಾಗಿ । ಒಲಿಸಿ ಹರಿಯ ಪಾದ ಜಲಜ ಭಜಿಸಿದಂಥ ॥ ೪ ॥ ಭೂತಳ ದೊಳಗೆತಿನಾಥ ರಾಘವೇಂದ್ರ । ಖ್ಯಾತಗುರು ಜಗನ್ನಾಥ ವಿಠಲನೆಂಬ ॥ ೫ ॥

**೭೬ ಪದ—ರಾಗ—ಅಸಾವೇರಿ—ತಾಳ ಏಕ**

ಅರಿಯಾರೊ ಅಂದಿಗಂದಿಗನ್ನ । ಈ । ಧರಿಯೊಳಿವರ ಮಹಿಮೆ ಘನ್ನ ॥ ಪ ॥ ಮರುತಾವೇಶಯುತ ಉರಸಾಂಶರನ್ನ ॥ ಅ. ಪಲ್ಲ ॥

ಪ್ರಹ್ಲಾದ ಲಕ್ಷ್ಮಣ ಬಾಲ್ಹೀಕ ವ್ಯಾಸನು ॥ ಇಲ್ಲೀಗ ರಾಘವೇಂದ್ರ ಉಲ್ಲಾಸ ಬಡುವದು ॥ ೧ ॥ ಇನ್ನೂರು ನಾಲ್ವತ್ತು ಮುನ್ನೀಗ ಪೋದನ್ದು ॥ ನನ್ನೂರು ಆರು ವತ್ತು ಇನ್ನು ಉಳದಿಹದನ್ನು ॥ ೨ ॥ ಎಲ್ಲೆಲ್ಲಿ ನೋಡಲು ಇಲ್ಲದ ಸ್ಥಳವಿಲ್ಲ । ಬಲ್ಲ ಭಕ್ತರಿಗೆ ಅಲ್ಲೆಲ್ಲಿ ತೋರುವದು ॥ ೩ ॥ ಖುಲ್ಲ ನರರಿಗೆ ಎಲ್ಲೆಲ್ಲಿ ಇಲ್ಲವೊ । ಸಲ್ಲೋದು ನಿಶ್ಚಯ ಸುಳ್ಳಲ್ಲ ಈ ಮಾತು ॥ ೪ ॥ ದುಷ್ಟ ಜನರಿಗೆ ಇಷ್ಟಾರ್ಥ ಕೊಡನೊ ಮ್ಯೆ । ಶಿಷ್ಟ ಜನರಿಗೆ ಇಷ್ಟಾರ್ಥ ಕೊಡುವೊದನ್ನು ॥ ೫ ॥ ಇವರ ನಂಬಿದ ಜನ ದಿವಿಜರು ನಿಶ್ಚಯ । ಭುವನದೊಳಗೆ ಇನ್ನು ಇವರಿಗೆ ಸರಿಯುಂಟೆ ॥ ೬ ॥ ಇವರನ್ನೆ ಮೊಲಿಸಲು ಪವನಾನು ಮೊಲಿಪೋಸು । ದಿವಿಜಾರು ತ್ತಮ ಮಾಯಾಧವ ತಾನೆ ಮೊಲಿವನು ॥ ೭ ॥ ಅಮಿತ ಮಹಿಮನೆಂದು ಪ್ರಮಿತರು ಪೇಳೋರು । ಸುಮತೀಗಳ ಮನಕೆ । ಗಮಿಸುತಲಿರುವೊದನ್ನು ॥ ದಾತಾ ಗುರು ಜಗನ್ನಾಥ ವಿಠ್ಠಲ ಬಹು । ಪ್ರೀತಿಯಿಂದಲಿವರ ಖ್ಯಾತಿ ಮಾಡಿದನ್ನು ॥ ೯ ॥

೮೭ ಪದ—ರಾಗ—ಶಂಕರಾಭರಣ—ತಾಳ ಏಕ.

ಎಂಥಾತ ಗುರುರಾಯನು ಜಗ । ದಂತರ್ನಿಯಾಮಕನು । ॥ಪಲ್ಲ॥ ಸಂತೋಷದಿಂದಲಿ ಅಂತೆ ವಾಸಿಗಳ ನಿಂತು ಪಾಲಿಸುತಿಪನು ॥ ಉಪ. ಪಲ್ಲ॥ ಚಿಂತೆಯು ಯಾಕೆಂದನು । ನಿಶ್ಚಿಂತಿ ಮಾರ್ಗವಿದೆಂದನು । ಅಂತರದೊಳು ಸಿರಿಕಾಂತನ ಪದವೇ । ಕಾಂತದಿ ಭಜಿಸೆಂದನು ॥ ೧ ॥ ಯಾತಕೆ ಶ್ರಮವೆಂದನು ನಿನಗೆ ಪಾತಕವಿಲ್ಲೆಂದನು । ದೂತಾನೆ ಎನ್ನೋಪ್ಪ ಮಾತರಿಶ್ವಗೆ ಸಿರಿ । ನಾಥನ ಭಜಿಸೆಂದನು ॥ ೨ ॥ ಪೋತನೆ ಕೇಳೆಂದನು । ಎನ್ನ ಮಾತು ಮೀರದಿರೆಂದನು । ಪಾಥೋಜಗುರು ಜಗನ್ನಾಥ ವಿಠ್ಠಲ ನಿನ್ನ । ಮಾತು ಲಾಲಿಪನೆಂದನು ॥ ೩ ॥

೮೮ ಪದ—ರಾಗ—ಶಂಕರಾಭರಣ—ಅಟ್ಟತಾಳ

ರಾಯರ ಪದಯುಗ ತೋಯಜ ವಿರಲೆಮ । ರಾಯನ ಭಯವಿಲ್ಲ ಮನಕೆ ॥ ಪಲ್ಲ ॥ ಹೇಯ ಸಂಸಾರೆಂಬ ತೋಯಧಿ ದಾಟಿಸಿ ಶ್ರೇಯಸ್ಸು

ಸೌಖ್ಯವ ನೀಡೋದು ಜನಕೆ ॥ ಉಪ ಪಲ್ಲ ॥ ಸ್ನಾನ ಸಂಧ್ಯಾ ಜಪ ಧ್ಯಾನ ಮೌನವ ಬಿಟ್ಟು । ನಾನಾವ್ಯಸನವೊಳಗಿರುತಿರಲು । ಏನೇನು ವಿಧ ವಿಧ ಮಾನಪ ಮಾನವು । ಹಾನಿವೃದ್ಧಿ ಲಾಭಾ ಲಾಭವೇನು । ನೀನೆ ನೀಡುವಿಯೆಂಬ । ಜ್ಞಾನದಿಂದನುಸಂಧಾನ ಮಾಡುತಲಿಪ್ಪ ನರಗೆ ॥ ೧ ॥ ಸತಿ ಸುತ ಹಿತಜನ ವಿತತ ವೃತ್ತಿ ಕ್ಷೇತ್ರ । ಮಿತಿಯಿಲ್ಲ ಸೌಭಾಗ್ಯವತಿ ಶಯದಿ । ಪತಿತರ ಸಂಗದಿ ಮತಿಗೆಟ್ಟು ತಾ ಪರ । ಸತಿಯರಿಗೊಲಿದೂ ಅನುದಿನದಿ । ಸ್ತುತಿನತಿ ಶ್ರೀ ಹರಿಕಥೆಗಳ ಕೇಳದೆ । ವ್ರತ ನೇಮ ನಿರಾಹಾರ ತ್ಯಜಿಸಿ ॥ ಸತತ ಮಾಡುವ ಕರ್ಮ ತತಿಗಳ ಗುರುಪಾದ ವೃತತಿಜ ಯುಗ ಕೀವ ಮತಿಯುಳ್ಳ ನರಗೆ ॥ ೨ ॥ ದಾತನಾಗದೆ ಪರ ಘಾತಕ ತಾನಾಗಿ । ಪಾತಕ ಕರ್ಮವ ಮಾಡಲೇನು । ರೀತಿಯಿಲ್ಲದೆ ಬಹು ಮಾತುಗಳಾಡುತ । ಜಾತಿ ಕುಲಾಚಾರ ತೆಜಿಸಲೇನು । ಯಾತನಮಯ ಭವಪಾಥೋ ನಿಧಿಯೊಳು ಗೀತೆರದಲಿ ಮುಳುಗಿರಲೇನು । ನೀತ ಗುರು ಜಗನ್ನಾಥ ವಿಠಲಗತಿ ಪ್ರೀತನಾದ ಗುರು ದೂತನಾದವಗೆ ॥ ೩ ॥

### ೮೯ ಪದ—ರಾಗ—ಶಂಕರಾಭರಣ—ತಾಳ ಏಕ

ದಾತ ನೀತ ಯತಿನಾಥ ಸಿಜಪವ । ದೂತ ಜನರ ಪೊರೆವ । ಧಾತನಾಂಡದೊಳು ಖ್ಯಾತನಾಗಿ ಸಿರಿ । ನಾಥ ನೊಲಿಸಿ ಮೆರೆವ ॥ ನೀತ ಮನದಿ ತನ ಮಾತು ಮೀರದಿಹ । ಗೀತೆರದಿ ತಾನೆ ಪೊಲಿವ ॥ ತಾತನೆ ಮನೋಗತ ಭೀತಿಯ ಬಿಡಿಸೆನೆ । ಪ್ರೀತ ಮನದಿ ತಾಬರುವ ॥ ಪಲ್ಲ ॥ ರಾಮ ಕೃಷ್ಣ ನರಹರ್ಯಂಘ್ರಿ । ಪ್ರೇಮ ಮನದಿ ಭಜಿಪ । ನೇಮದಿ ತನ್ನನು ನಂಬಿದ ಜನರಿಗೆ । ಕಾಮಿತ ಫಲರೂಪ । ಈ ಮಹಮಹಿಮೆಯ ತೋರುತಲಿ ಭೂಮಿ ಸುರರ ಭೂಪ ॥ ತಾಮಸ ಮತಿ ತಿಮಿರಕೆ । ಧೂಮಕೇತು ನೆನಿಪ ॥ ೧ ॥ ಮಂದ ಜನರಿಗಲಭ್ಯ ಅಮಂದ ಜನರ ಪ್ರೀಯಾ । ಕುಂದೆಣಿಸದೆ ತಾ । ನಂದ ಕೊಡುವಾನಂದ ಮಹರಾಯಾ । ಸಂದರುಶನದಿಂದ ಘವೃಂದ ತರಿದು ಪೊರೆವ ಜೀಯಾ । ಸುಂದರ ತರವರ ವೃಂದಾವನಸ್ಥಿತ ನತಿಪರಿಗೆ ಪ್ರೀಯಾ ॥ ೨ ॥ ದಾತ ಗುರು ಜಗನ್ನಾಥ ವಿಠ್ಠಲನತಿ ।

ಪ್ರೀತಿಯಿಂದ ಭಜಿಪಾ । ದೂತಜನರು ಆತುರದಲಿ ಕರೆಯಲು ಪ್ರೀತನಾಗಿ ಬಪ್ಪ ॥ ಮಾತೆಯುತೆರ ಚರರ ಮಾತು ನಡೆಸಿಕೊಡುವ ನೀ ಭೂಪ । ಈತಗೆ ಸರಿ ಯತಿನಾಥರ ಕಾಣೆನೊ । ಭೂತಳೇಶರಧಿಪ ॥ ೩ ॥

## ೯೦ ಪದ—ರಾಗ—ರೇಗುಪ್ತಿ—ತಾಳ ಏಕ.

ವೃಂದಾವನದಲಿ ನಿಂದು ರಾಜಿಪನ್ಯಾರೆ ಪೇಳಮ್ಮಯ್ಯಾ ॥ ಪಲ್ಲ ॥ ಬಂದ ಜನ ರಘುವೃಂದ ಕಳೆದು ಆನಂದ ನೀಡುವೊ ರಾಘವೇಂದ್ರ ಕಾಣಮ್ಮಾ ॥ ಉಪ ಪಲ್ಲ ॥ ನತಿಸುವ ಜನರ ಹಿತದಲಿ ಪಾಲಿಪನ್ಯಾರೆ ॥ ಪೇ ॥ ಸತಿಯರು ಬೇಡಲು ಸುತರನು ನೀಡುವನ್ಯಾರೆ । ಪೇ ॥ ಮತಿ ರಹಿತಗೆ ಶುಭಮತಿಯನು ನೀಡುವನ್ಯಾರೆ । ಪೇ ॥ ಪತಿತ ಪಾವನ ಶ್ರೀಪತಿಯ ಕರುಣದಲಿ । ವಿತತ ಮಹಿಮ ಗುರುವರ್ಯ ಕಾಣಮ್ಮಾ ॥ ೧ ॥ ಕುಷ್ಠ ರೋಗಗಳ ನಷ್ಟಮಾಡುವನ್ಯಾರೆ ॥ ಪೇ ॥ ದೃಷ್ಟಿಹೀನಗೆ ಶುಭದೃಷ್ಟಿಯ ನೀಡುವನ್ಯಾರೆ ॥ ಪೇ ॥ ಶಿಷ್ಟ ಜನರೊಳಗತಿ ಶ್ರೇಷ್ಠನೆಂದೆನಿಸಿ । ಸೃಷ್ಟಿ ಜನರಿಗಭೀಷ್ಟದ ನೀತಮ್ಮಾ ॥ ೨ ॥ ಭೂತಪ್ರೇತಗಳ ಭೀತಿಯ ಬಿಡಿಸುನ್ಯಾರೆ । ಪೇ ॥ ಮಾತ ಪಿತರ ತೆರ ದೂತರ ಪಾಲಿಪನ್ಯಾರೆ । ಪೇ ॥ ನೀತ ಮಹಿಮೆಯ ನೀತೆರ ತೋರುವನ್ಯಾರೆ । ಪೇ ॥ ದಾತ ಗುರು ಜಗನ್ನಾಥ ವಿಠಲಗತಿ ಪ್ರೀತಿಕರ ಯತಿನಾಥ ಕಾಣಮ್ಮಾ ॥ ೩ ॥

## ೯೧ ಪದ—ರಾಗ—ಅಸಾವೇರಿ—ತಾಳ ತ್ರಿವಿಡಿ.

ಶರಣ ಜನರ ಕಲ್ಪತರುವೆ । ನೀನೆ ಕರುಣದಿ ಪೊರೆಯೆನ್ನ ಗುರುವೆ ॥ ಪಲ್ಲ ॥ ಶರಣರಿಲ್ಲದ ಕರುಣಿನೆಂದು । ಶರಣು ಪೊಕ್ಕೆನು ಚರಣ ಕಮಲಕೆ । ಶರಣನೆಂದು ಕರುಣದಿಂದಲಿ । ಕರುಣಿಸೆನ್ನನು ಕರುಣ ಸಾಗರ ॥ ಉಪ ಪಲ್ಲ ॥ ತಾಪತ್ರಯದಿ ಬಹುನೊಂದೆ । ಭವ । ಕೂಪಾರ ದೊಳಗತಿನಾ ಬೆಂದೆ । ಪಾಪ ಮೋಚಕ ನಿಷ್ಪಾಪಿ ಜನರ ಪಾಲ । ಕಾಪ್ಯಾಡೋ ನೀ ಎನ್ನ । ಆಪಾರ ಮಹಿಮನೆ ॥ ದ್ವಾಪರದಿ ಯಮುವರ ಸಾಂದೀಪ ಪುತ್ರನ ತೋರಿ ಕಾಯ್ದನ । ಪೂವ ಬಕನಳಿದು ಸಲಹಿದ । ನಾಪರಿಯಲಿ ಯೆನ್ನ

ಸಲಹೊ ॥ ೧ ॥ ಕಾಮಿತ ಫಲವ ನೀನೆಂಬ ಬಲು । ಪ್ರೇಮದಿ ಬಳಿಗೆ ನಾ ಬಂದೆನೊ । ಸ್ವಾಮಿ ಗುರು ಸಾರ್ವ ಭೌಮ ನಿನ್ನಂಘ್ರಿಗಳ । ತಾಮರಸವ ಮನೋಧಾಮದಿ ನಿಲಿಸೆಂದೆ । ರಾಮ ಕೌಶಿಕ ಮಖವ ಕಾಯ್ದನು । ಭೀಮ ವಿಪ್ರರ ಭೀತಿ ಬಿಡಸಿದ । ಧೂಮಕೇತನ ನುಂಡು ಕೃಷ್ಣನು । ಆ ಮಹದ್ಭಯ ಕಳದ ತೆರದಿ ॥ ೨ ॥ ತಾತ ನಿನ್ನನು ಬಾಧೆ ಬಡಿಸೆ । ಸಿರಿ ನಾಥ ತಾ ಬಂದಾಗ ಬಿಡಿಸೆ । ದಾತ ಗುರು ಜಗನ್ನಾಥ ವಿಠಲನತಿ । ಪ್ರೀತಿಯಿಂದಲಿ ನಿನ್ನ ಮಾತು ಕೇಳಿದ ತೆರ । ಮಾತು ಲಾಲಿಸಿ ಕಾಯೊ ಯತಿಕುಲ ನಾಥ ಎನ್ನ ಪರಾಧ ಮನ್ನಿಸಿ । ಭೀತಿಯನು ಸವದು ಪಾಲಿಸ ನಾಥ ರಕ್ಷಕ ನೀನೇ ಗುರುವರ ॥ ೩ ॥

### ೯೨ ಪದ—ರಾಗ—ಕಲ್ಯಾಣಿ—ತ್ರಿವಿಡಿತಾಳ

ನಂಬಿ ಕೆಟ್ಟವರಿಲ್ಲವೊ ಈ ಗುರುಗಳ । ನಂಬದೇ ಕೆಡುವರುಂಟೊ ॥ ಪಲ್ಲ ॥ ನಂಬಿದ ಜನರಿಗೆ ಬೆಂಬಲ ತಾನಾಗಿ । ಹಂಬಲಿಸಿದ ಫಲ ತುಂಬಿ ಕೊಡುವರನ್ನ ॥ ಉ. ಪಲ್ಲ ॥ ಜಲಧರ ದ್ವಿಜವರಗೆ ತಾನೇ ವೊಲಿದು । ಸುಲಭ ಮುಕುತಿಯನಿತ್ತನು । ಚಲುವ ಸುತನ ಪಡೆದ ಲಲನಿಗೆ ತ್ವರದಿಂದ । ಪುಲಿನ ಗರ್ತದಿ ದಿವ್ಯ ಜಲವನಿತ್ತವರನ್ನ ॥ ೧ ॥ ಮೃತ್ಯು ದೂತರು ತನ್ನನು ವೊಂದಿದ ನಿಜ । ಭೃತ್ಯನಕರದೊಯ್ಯಲು । ಸತ್ತ ದ್ವಿಜನ ತಾನು ಮತ್ತೆ ಧರಿಗೆ ತಂದು ಮೃತ್ಯು ಬಿಡಿಸಿ ಸುಖವಿತ್ತು ಪೊರದಿಹರನ್ನ ॥ ೨ ॥ ಧಿಟ್ಟ ಗುರು ಜಗನ್ನಾಥ ವಿಠ್ಠಲ ನೊಲಿದು । ಘಟನ ಮಾಡುದರಿಂದ । ಘಟನಾ ಘಟನಕಾರ್ಯ ಘಟನ ಮಾಡುವೋ ನಮ್ಮ । ಪಟು ಗುರುವರ ಹೃತ್ಪುಟದಿರುವೋರನ್ನ ॥ ೩ ॥

### ೯೩ ಪದ—ಶ್ರೀರಾಗ—ತಾಳ—ತ್ರಿವಿಡಿ

ಇಂಥ ಗುರುಗಳ ಕಾಣೆನೊ । ಈ ಜಗದಿ ನಾ ॥ ಪಲ್ಲ ॥ ಇಂಥ ಗುರುಗಳಾನೆಂತು ಕಾಣೆ ನಾನಂತ ಚೇತನರೊಳಂತ ಬಹಿರದಿ । ನಿಂತು ಕರ್ಮವರಂತೆ ಮಾಡುವ । ನಂತ ಮಹಿಮಾನಂತ ನಾಂಶಜರಿಂಥ ॥ ಉಪ ॥

ತುಂಗಾ ತೀರದಿ ನಿವಾಸ । ಮಂತ್ರಾಲಯ ಕೀಶ । ತುಂಗ ವಿಕ್ರಮ ಜಗಧೀಶ । ಶ್ರೀ ಹರಿದಾಸ । ಮಂಗಳಮಹಿಮ । ರಂಗನ ಕರುಣಾ ಪಾಂಗ ಪಡೆದ ಕೃ । ಪಾಂಗ ಯತಿ ಕುಲೋತ್ತುಂಗ ಮಾಯಿಮಾ । ತಂಗ ಸಂಘಕೆ । ಸಿಂಗ ದುರುಳ ಭುಜಂಗಗಣ ವಾತಂಗ (ವಿಹಂಗ) । ಸ್ವಮತೋ ತ್ತುಂಗ ವಾರಿಜ ಭೃಂಗ ಮನ್ಮನೋರಂಗ ಬಿಂಬನ । ಇಂಗಿತಜ್ಞರ ಸಂಗ ಪಾಲಿಸಿ ಕಂಗಳಿಗೆ ತಾವು ಕಂಗೊಳಿಪರಿಂಥ ॥ ೧ ॥ ಮೇದಿನಿ ತಳದಲಿ ಜನಿಸಿ ಸುಖ ತೀರ್ಥರ ಭಜಿಸಿ । ಭೇದ ಮತವನೆ ಸಾಧಿಸಿ ವಾದದಿ ಜೈಸಿ । ಮಾಧವನೆ ಸರ್ವೋತ್ತಮ ನೆನಸಿ ಸ್ವಮತವ ಸ್ಥಾಪಿಸಿ । ಬೋಧಿಸಿ ತತ್ವವ ಭೇದಿಸಿ ಪರ ಮತ ಛೇಧಿಸಿ ಕುಮತಿಯ । ಶೋಧಿಸಿ ತತ್ವದ । ಹಾದಿಯ ಹಿಡಿಸಿ । ಮೋದ ಕೊಡುವ ಪಂಚ ಭೇದವ ತಿಳಿಸಿ । ಸಾದರ ತನ್ನಯ ಪಾದಸೇವಾ । ಮೋದವ ನೀಡುವ ಮೇದಿನಿ ದಿವಿಜಾರಾಧಿತ ಪದಯುಗ । ವೋದಿದ ಜನ ಮನೊ ಭೇದಗೊಳಿಪ ಭವೋದಧಿ ದಾಟಿಸಿ ಶ್ರೀದನ ತೆರ ದಲಿ । ಮೇದಿನಿಯೊಳು ಓರಿಂಥ ॥ ೨ ॥ ಧಿಟ್ಟಗುರು ಜಗನ್ನಾಥ ವಿಠ್ಠಲ ದೂತ । ಸೃಷ್ಟಿಯೊಳಗತಿ ವಿಖ್ಯಾತ ನೆನಿಸಿದ ಯತಿನಾಥ । ಕುಷ್ಟಾದಿ ರೋಗವ ಘಾತ ಮಾಡುವ ನೀತ । ಇಷ್ಟಾರ್ಥವ ತಾ ಸೃಷ್ಟಿಗೆ ಬೀರುವ । ಶಿಷ್ಟ ಜನರನುತ್ಕೃಷ್ಟದಿ ಪಾಲಿಪ । ಎಷ್ಟು ಪೇಳುವೋದು ತ್ಕೃಷ್ಟನ ಗುಣಗಳ । ಭ್ರಷ್ಟರರಿಯರೆಲೆ । ಶಿಷ್ಟರು ಬಲ್ಲರು । ಇಷ್ಟೇ ಅಲ್ಲ ವೀತನ ವಿಶಿಷ್ಟ ಮಹಿಮೆಗಳಿಷ್ಟು ಪೇಳಲವ । ಶಿಷ್ಟವೆನಿಸಿವವು । ಸೃಷ್ಟಿಹೀನರಿಗೆ ದೃಷ್ಟಿಯ ನೀಡುವ ದೃಷ್ಟ ಮಾತ್ರದಿ ತುಷ್ಟಿಬಡಿಸುವೊರಿಂಥ ॥ ೩ ॥

## ೯೪ ಪದ—ರಾಗ—ಜಂಜೂಟಿ—ತಾಳ ಏಕ

ಯಾತರ ಭಯ ಯತಿನಾಥನ ಪದಯುಗ ದೂತನಾದ ನರಗೆ ॥ ಪಲ್ಲ ॥ ಪ್ರೋತರು ಸತಿ ಮಹ । ಭೂತಿಯು ನೃಪತನ ನಾಥನೆಂದರ್ಚಿಸಿ ತಾತನೆಂ ಬುವಗೆ ॥ ಅನು. ಪಲ್ಲ ॥ ವಂದಿಸಿ ಧನವನು ತಂದು ಜನರು ತನ ಮುಂದೆ ಸುರಿಸಲೇನು । ನಂದನೆ ಮಾಡದೆ ನಿಂದಿಸಲೇನವರಿಂದ ಪೋದ ದೇನು । ಬಂದ ಬಂದ ಜನರಾನಂದದಿ ತನ್ನನು । ಪೊಂದಿ ನಡಿಯಲೇನು ॥

ಸುಂದರ ಗುರು ಪಾದ ಮಂದಜಯುಗ ಮನೊ। ಮಂದಿರದಲಿ ತಾ। ತಂದು ಭಜಿಪನಿಗೆ ॥ ೧ ॥ ಉದಯದಲಮರರ ನದಿಯಲಿ ಸ್ನಾನಕೆ। ಒದಗದೆ ತಾಮಲಗಿರಲೇನು। ಮದನ ಕೇಳಿಯೊಳು ಸುದತಿಯು ಸಹಿತದಿ ಮುದದಲಿ ಕುಳಿತಿರಲೇನು। ಕದನದ ವಾರ್ತೆಯು ವದನದಲ್ಯಾಡುತ। ಮದಕವ ಮಾಡಿದರೇನು॥ ಸದಮಲ ಗುರುಪದ ಪದುಮವು ತನ್ನಯ ಹೃದಯದೊಳಗೆ ಬಲು ಮುದದಲಿ ಭಜಿಪನಿ ॥ ೨ ॥ ಅನ್ಯರ ಮನೆಯಲಿ ಮನ್ನಣೆ ದಿನ ದಿನ ಘನ್ನವಾಗಿ ಮಾಡಿದರೇನು। ಭಿನ್ನ ಮನದಿ ಪರರನ್ಯಥ ಕಾರ್ಯವ ಬೆನ್ನು ಬಿಡದೆ ಮಾಡಿದರೇನು। ತನ್ನಯ ಸತಿಸುತ ಮನ್ನಿಸ ದನುದಿನ। ಘನ್ನತೆ ಕಳದಿರಲೇನು॥ ಘನ್ನ ಗುರು ಜಗನ್ನಾಥ ವಿಠ್ಠಲನ್ನ। ಮನ್ನದಿ ಭಜಿಸಿ ಪಾವನ್ನ ನೆನಿಸುವವ। ಗ್ಯಾತರ ಭಯ ॥ ೩ ॥

೯೫ **ಪದ—ರಾಗ—ಮಧ್ಯಮಾವತಿ—ಏಕತಾಳ**

ಕೊಡು ಬ್ಯಾಗಭೀಷ್ಟವ ತ್ವರದಿ ನೀ ಸನ್ಮನದಿ ॥ ಪಲ್ಲ ॥ ಕೊಡುವೆ ದೆನುತ ನಿನ್ನಡಿಯನು ಭಜಿಸುವ। ಬಡವನ ಕರವನು ಪಿಡಿದಕಾಲದಿ ॥ ಉಪ ಪಲ್ಲ ॥ ಒಡೆಯಾ ನೀನೆನುತತಿ ಹರುಷದಲಿ। ನಂಬಿದೆ ನಿನ್ನ। ಬಿಡದಲೆ ಪೊರಿ ಎನ್ನ ಕರುಣದಲಿ। ಎನ್ನಯ ಕರವ। ಪಿಡಿದು ಭವಶ್ರಮ ಕಳೆಯುತಲಿ। ಬಹು ಮೋದದಲಿ॥ ನುಡಿದ ವಚನವ ಚಿತ್ತಕೆ ತಂದು। ಪೊಡವಿಪತಿ ಗುರುರಾಯ ನೀನೀ ॥ ೧ ॥ ನಮಿಪ ಜನರಿಗೆ ಸುರಧೇನು। ಭಜಿಪ ಜನಕೆ। ಅಮರೋತ್ತಮ ವರ ತರುನೀನು। ಚಿಂತಿಪ ಜನಕೆ। ಸುಮನೋ ವರ ರತ್ನನು ನೀನು। ಎನುತಲಿ ನಾನು ॥ ಅಮಿತ ಮಹಿ ಮೆಯ ತೋರುತಲೀಗ। ಶ್ರಮವ ಕಳೆದು ಸುಖ ಸುರಿಸೆಲೋನೀ ॥೨॥ ಭೂತಳ ಮಧ್ಯದಲತಿಖ್ಯಾತ। ನೆನಿಸಿದ ನಾಥ। ಪಾತಕ ಕುಲವನ ನಿರ್ಧೂತ। ಮಾಡುತ ನಿಜಪದ। ದೂತ ಜನತತಿ ಮನೋರಥ। ಪೂರ್ತಿ ಪದಾತ ॥ ವಾತ ಗುರು ಜಗನ್ನಾಥ ವಿಠಲಗತಿ। ಪ್ರೀತಿ ಪಾತ್ರ ಸುಚ ರಿತ್ರನೆ ॥ ೩ ॥

೯೬ **ಪದ—ರಾಗ—ನಾದ ನಾಮಕ್ರಿಯ—ತಾಳ ಏಕ**

ಗುರು ರಾಘವೇಂದ್ರ ಭೋ ಸಾರ್ವಭೌಮ ಸದಾ ಪಾಲಿಸೆನ್ನ । ಪರಾವರೋ ಹರಿ ಚರಾಗ್ರೇಸರ । ಪರಿಸರ ಸಮಿಪೆ ನಿನ್ನ ॥ ಪಲ್ಲ ॥ ಧರಾತಳದಿ ಧೇನು ವರಾನಂದದಿ । ಚರಾ ಜನರ ಕಾಮ । ಪರಿಪೂರ್ತಿಸಿ । ದುರುಳ ಸಂಗವ ತ್ವರದಿ ಕಳಿಪೋ ಧೀಮ ॥ ೧ ॥ ಭಯಾ ಹರನೆ ಸದ್ದಯಾಕರನೆ ಆ । ಮಯಾ ದೂರನೆ ನಿನ್ನ । ಜಯಾ ಪಾಲಿಸೊ ಧಿಯಾ ಬೇಡುವೆನು । ಸಯಾ ಯತೀತ್ಯನ್ನಾ ॥ ೨ ॥ ದಾತಾ ಗುರು ಜಗನ್ನಾಥ ವಿಠಲ ಪಾದ । ಪಾಥೋಜಯುಗವನಾ । ನೀತ ಸುಖಮಯವ್ರಾತ ಪಾಲಿಸೋ ನಿಜ । ದೂತ ಜನರುಗಳತಾ ॥ ೩ ॥

೯೭ **ಪದ—ರಾಗ—ಶಂಕರಾಭರಣ—ತಾಳ ಏಕ.**

ನೀ ಪಾಲಿಸೋ ಗುರುರಾಯ । ಎನ್ನ ಕಾಪ್ಯಾಡೀಗ ಮಹರಾಯ ॥ ಪಲ್ಲ ॥ ಭೂಪತಿ ನೀ ಎನ್ನ ಆಪತ್ತು ಬಾಂಧವ । ಶ್ರೀಪತಿ ಪದ ಪ್ರಿಯ ಈ ಪರಿ ಮಾಡವೆ ॥ ಉಪ ಪಲ್ಲ ॥ ಪಾಪಿಗಳೊಳಗೆ ಹಿರಿಯನು ನಾ । ನಿಷ್ಪಾಪಿಗಳರಸೆ ಗುರುರಾಯಾ । ಅಪಾರ ಜನುಮತಿ ಬಂದಿವೆ । ತಾಪತ್ರಯ ಕಳಿ ಮಹರಾಯಾ ॥ ೧ ॥ ನೀಚರವೊಳಗೆ ನೀಚನು ಪಾಪ ಮೋಚನ ಮಾಡೊ ಗುರುರಾಯ ॥ ಯೋಚನೆಯಿಲ್ಲವೆ ಅನ್ಯರ ಅನುದಿನ ಯಾಚಿಸಿ ಕೆಟ್ಟೆನೊ ಮಹರಾಯ ॥ ೨ ॥ ದೀನರ ವೊಳಗೆ ದೀನನು ನಾನೈ । ದಾಸಿಗಳರಸೆ ಗುರುರಾಯ । ಜ್ಞಾನವುಯಿಲ್ಲವೆ ನಾನು ನನ್ನದೆಂಮ । ಹೀನ ಮತ್ತ್ಯಾದೆನೋ ಗುರುರಾಯ । ಅನ್ನವುಯಿಲ್ಲವೆ ಅನ್ಯರ ಮನೆಯಲಿ ಕುನ್ನಿಯಾದೆನೋ ಗುರುರಾಯ । ನಿನ್ನನೆ ನಂಬಿ ಅನ್ಯರ ಬೇಡೋಮ । ಘನ್ನತಿ ನಿನಗೆ ಮಹರಾಯ ॥ ೪ ॥ ದಾತನೆ ನಿನ್ನ ಪೋತನುನಾ ನೀ । ತೆರ ಮಾಳ್ಪರೆ ಗುರುರಾಯ ॥ ನೀತ ಗುರು ಜಗನ್ನಾಥ ವಿಠಲ ಪದ ದೂತನು ನೀನೆ ಮಹರಾಯ ॥ ೫ ॥

೯೮ **ಪದ—ರಾಗ—ಆನಂದಭೈರವಿ—ತಾಳ ಆದಿ.**

ರಾಘವೇಂದ್ರ ನೀನೆ ಪಾಲಿಸೊ । ನತಜನ ಪಾಲ । ಯೋಗಿಗಳ

ಮನೋ ಲೋಲನೆ ॥ ಪಲ್ಲ ॥ ಜಾಗು ಮಾಡವೆ ನಿನ್ನಸುರಾಗದಿಂ ಮನ ದುಸರ । ಬಾಗಿ ನಮಿಸಿ ಬೇಡಿಕೊಂಬೆ ಯೋಗಿಕುಲ ಶಿರೋಮಣಿಯೆ ॥ ಉ. ಪ ॥ ಅನುದಿನವಲ್ಲಿ ನಾನು ಘನ ವಿಪತ್ತುಗಳನು । ಅನುಭವ ಮಾಡಿದೆನೋ ॥ ಘನ ಮಹಿಮನೆ ನೀನು ಘನ ಸುಖವಿತ್ತು ನಿನ್ನ । ಮನ ಪೂರ್ತಿ ಭಜಿಸುವಂಥ । ಅನುಪಜ್ಞಾನ ಬಕ್ತಿ ಜನುಮ ಜನುಮದಿ ನಿತ್ತು ॥ ೧ ॥ ಹೇಸಿ ಸಂಸಾರವಲ್ಲಿ । ಮೋಸಗೊಂಡು ಅದರ ಸುಖ । ಲೇಶ ಗಾಣದೆ ಬಹು ಕ್ಲೇಶ ಬಡುವೆನಯ್ಯ ನಿತ್ಯ । ಈಶ ಸಂಸಾರ ಮಹ ಪಾಶ ಬಿಡಿಸಿ ತಪೋವಾಸನದಲ್ಲಿ ಮನೋ । ಲೇಸುಕೊಟ್ಟು ನಿತ್ಯದಲ್ಲಿ ॥ ೨ ॥ ಎಷ್ಟುದಿನ ಭವದೊಳು ಕಷ್ಟಬಡುತ ಜ್ಞಾನ । ಭ್ರಷ್ಟನಾಗಿರಲಿ ಸ್ವಾಮಿ । ದೃಷ್ಟಿಯಿಂದ ನೋಡಿ ನಿನ್ನ । ಮುಟ್ಟಿ ಭಜಿಸುವೊ ದಿವ್ಯ ದೃಷ್ಟಿ ಎನಗಿತ್ತು ನಿಮ್ಮ । ದಿಟ್ಟಗುರು ಜಗನ್ನಾಥ ವಿಠ್ಠಲನ್ನ ನೋಡುವಂತೆ ॥ ೩ ॥

## ೯೯ ಪದ—ರಾಗ—ಧನಾಶ್ರಿ—ತಾಳ ಏಕ.

ಯಾಕೆ ಮೂಕನಾದೆಲೊ ಗುರುವೆ ನೀನ್ಯಾಕೆ ಮೂಕನಾದ್ಯೋ ॥ ಪಲ್ಲ ॥ ಯಾಕೆ ಮೂಕನಾದ್ಯೋ ಲೋಕಪಾಲಕ ಎನ್ನ । ಸಾಕುವೊ ರಾರಯ್ಯ ಶ್ರೀಕರ ರಾಘವೇಂದ್ರ ॥ ಉ. ಪ ॥ ಹಿಂದಕ್ಕೆ ನೀ ಎನ್ನ ಮುಂದೆ ಸುಳಿದೀಗ । ಮುಂದಿಯೆಂದದಿ ಯೆನ್ನ ಮಂದನ ಮಾಡೀಗ ॥ ೧ ॥ ಬೇಕಾಗದಿದ್ದರೆ ಯಾಕೆ ಕೈಯ್ಯ ಪಿಡಿದಿ । ಕಾಕು ಜನರೊಳಿನ್ನ ನೂಕಿ ಬಿಟ್ಟು ಈಗ ॥ ೨ ॥ ನಿನ್ನಂಥ ಕರುಣಿಲ್ಲ । ಎನ್ನಂಥ ಕೃಪಣಿಲ್ಲ । ಘನ್ನ ಮಹಿಮನೆ ನೀ ಎನ್ನ ಬಿಟ್ಟು ಈಗ ॥ ೩ ॥ ಎಂದಿಗಾದರು ನಿನ್ನ ಪೊಂದಿ ಕೊಂಡವನಲ್ಲೆ । ಇಂದು ನೀ ಬಿಟ್ಟರೆನ್ನ ಮುಂದೆ ಕಾಯುವರ್ಯಾರೊ ॥ ೪ ॥ ಜನ್ಯಾನು ನಾನೀಗ । ಎನ್ನ ಜನಕನು ನೀನು । ಮನ್ನಿಸು ನೀ ನಿತ್ಯ ನನ್ನ ಶರಣನಲ್ಲೆ ॥ ೫ ॥ ಈಗ ಪಾಲಿಸದಿರೆ ಯೋಗಿ ಕುಲ ವರ್ಯ । ರಾಘವೇಂದ್ರನೆ ಭವ ಸಾಗುವ ಧ್ಯಾಗಯ್ಯ ॥ ೬ ॥ ನಾಥಾನು ನೀನಯ್ಯಾ । ನಾಥಾನು ನಾನಯ್ಯ । ಪಾಥೋಜ ಗುರು ಜಗನ್ನಾಥ ರಠ್ಠಲ ಪ್ರೀಯ ॥ ೭ ॥

## ೧೦೦ ಪದ—ರಾಗ—ಪೂರ್ವಿ—ಅಟ್ಟತಾಳ

ತುತಿಸಲೆನ್ನೊಶವೆ ನಿನ್ನ । ಶ್ರೀ ಗುರರನ್ನ ॥ ಪಲ್ಲ ॥ ತುತಿಸಲೆನ್ನೊಶವೆ ನಿನ್ನ ತುಳ ಮಹಿಮ ಮಹ। ಮತಿವಂತ ಜನರ ಸುಮತಿಗೆ ಸಿಲ್ಕದ ನಿನ್ನ ॥ ಉಪ ಪಲ್ಲ ॥ ಸ್ಮರಿಪ ಜನರ ಸುರತರು ಪಾಪ ಕಾಂತಾರ। ನರಸವು ಸಜ್ಜನ । ಶರಜನಿಚಯ ದಿನಕರ ತೆರ ನಿಜಪಾದ । ಸರಸಿಜ ಭಜಿಸುವ ಪರಮ ಭಕ್ತರ ಕುಮುದ । ಪರಸಿಚಯಕೆ ಸುಧಾಕರನಂತೆ ಧರಿಯಲ್ಲಿ । ಧುರದಿ ಮೆರೆವೊ ನಿನ್ನ । ಪರಮ ಕರುಣೆಯು ಯೆಂದು ॥ ನಿನ್ನಯ ಪಾದ ಮೊರೆವೊಕ್ಕೆನೊ ನಾ ಬಂದು । ನೀನೆ ಎನ್ನ ಪೊರೆಯು ಲಾಲಿಸು ನೀನೆಂದು ಚಿನ್ನೈಸಿದೆ ಪರಮ ಕೃಪಾಕರ । ಪೊರಿಯೊ ಅನತ ಬಂಧು ॥ ೧ ॥ ಪಯಕರ ನಿಜಭಕ್ತಾಮಯ ಹರ । ಸುಖಕರ। ಪ್ರಿಯವಾಗಿ ಸಂತತ ನಯವಾಗಿ ನಿಜ ಜನ । ಭಯಕರ ಭವಹರ । ಜಯಜಯ ದಾತ। ಜಯ ವಿಜಯಾತ್ಮಜ । ಜಯಕುಲ ದಿಗ್ವಿಜಯ । ಜಯಕಾಲದಲಿ ನಿಜ ಹಯಗ್ರೀವ ಮೂರ್ತಿಯ । ದಯದಿಳಿಯೊಳು ಜನಿಸಿ ಜನ್ಮದಿ ಮೂರ್ತಿಯ। ತ್ರಯಪಾದವನೆ ಭಜಿಸಿ ॥ ಯದದಿ ಮಹ ಜಯಶಾಲಿ ನಿಜ ಶತ್ರು ಜಯವತಾ ಸಲಿಸಿ ॥ ೨ ॥ ಭೂಸುರವರನಾಗಿ ಕಾಶ್ಯಪಿ ಸ್ಥಳದಲ್ಲಿ । ವಾಸಮಾಡಿ ಸಿರಿ ವ್ಯಾಸಕೃಷ್ಣ ಪಾದೋಪಾಸನೆ ಮಾಡುತ । ವ್ಯಾಸಮುನಿಯಾಗಿ । ವೇಶವೇಶದ ಭಾರ। ಲೇಶ ಪ್ರತಿಕಾವ । ವಾಸವಾಸದಿ ಸ್ಥಾಪಿಸಿ ಯಂತ್ರೋದ್ಧಾರ । ನೀಶ ಮಧ್ವ ಮುನಿಯನು ಸ್ಥಾಪಿಸಿ ಅಲ್ಲಿ । ವಾಸವಮಾಡಿ ತಾನು ಪುರಂದರ ದಾಸರಿಗೆ ಯಿನ್ನು । ಸುಮಂತ್ರೋಪದೇಶಿಸಿ ಅನುದಿನ ವಾಸ ಮಾಡಿ ನೀನು ॥ ೩ ॥ ಕ್ಷೋಣಿ ತಳದಿ ಕುಂಭ ಕೋಣಿ ನಗರದಲ್ಲಿ। ಕ್ಷೋಣಿ ದೇವೋತ್ತಮ ವೇಣಿ ವಂಕಟನಾಮ। ಕ್ಷೀಣಬಲ ಜ್ಞಾನ ಕಾಣಗೊಡದೆ ತನ್ನ । ಜಾಣತನದಿ ನರ ಮಾಣವಕನಂತೆ । ಪಾಣಿ ಭಿಕ್ಷಾನ್ನಕೆ ವಾಣ ಮಾಡುತ ನೀನು । ಕ್ಷೋಣಿಪ ಮನೆಗೆ ಬಾರೆ। ನಿನ್ನ ವೀಕ್ಷಣಗೈದು ತೋರೆ ॥ ಶುಭ ಲಕ್ಷಣ ಬ್ಯಾರೆ ಬ್ಯಾರೆ । ಇರಲು ನಿನ್ನ ಕ್ಷಣ ಬಿಡದಲೆ ಜಾನ ಮಣಿದು ನಮಿಸುತಿರೆ ॥ ೪ ॥ ಜನಪ ನಿನ್ನಯ ಮಹ ಘನತರ

ಚರಿಯಾ | ದಿನದಿನವಲಿ ನೋಡಿ ವಿನಯಪೂರ್ವಕ ಪಾದ | ವನಜ ಸೇವಕ ನಾಗಿ ತನುಮನ ಧನಧಾನ್ಯ | ನಿನಗೆ ಅರ್ಪಿಸಿ ನಿತ್ಯನಿನ ಸಂಗವಾಗಲು | ಜನುಮ ಯಿಲ್ಲೆಂಬುವ ಘನ ಜ್ಞಾನ ಭಕುತಿಯ | ಮನದಲ್ಲಿ ಯ್ಯೆದು ತಲೇ || ತಾನು ಅನುಮಾನ ಮಾಡದಲೆ | ಇರಲು ಅವನ | ಘನ (ವಾದ) ಸುಖ ರೂಪವಲ್ಲೆ | ಇರುವಂತೆ ಮನ ಪೂರ್ತಿಕರುಣಿಸಿ | ದ್ವನುಪಮ ಚರಿ ತಲ್ಲೆ || ೫ || ಸತ್ಯನಾಮಕ ಸುತ ಮೃತ್ಯುನಿಂದಲಿ ತಾನು | ಸತ್ತು ಪೋದ ವಾರ್ತೆ ಬಿತ್ತಿಸಿ ಲೋಕದಿ | ಉತ್ತಮ ನೀನಾಗ ಸತ್ಯಸಂಕಲ್ಪದ | ಗೊತ್ತು ತಿಳಿದು ಅವನ ಮತ್ತೆ ಈ ಲೋಕಕ್ಕೆ | ತತ್ಕಾಲದಲಿ ತಂದು ಉತ್ತಮ ಭಾರ್ಯಳ | ಜತ್ತು ಮಾಡಿದ ವಾರ್ತೆಯ | ಕೇಳಿ ಶೈವರು ತ್ತಮನಾತ್ಮಜಯಾ | ದ್ವಿಜನಂತೆ ಸತ್ತನೆಂದು ಕರಿಯಾ | ಅದನು ನೀನು ಸತ್ಯವೆಂದು ಪೇಳಿ | ಮತ್ತೆ ಪೊರದ್ಯೋ ಜೀಯ || ೬ || ಇನಂತೆ ಮೊದ ಲಾದ ಘನತರ ನಿನ ಮಹಿಮೆ | ಎನಗೆ ವಶವೆ ನಿತ್ಯ ಅನಿಮಿಷ ಮುನಿಜನ| ಮನಕೆ ಸಿಲ್ಕದೆ ವೃಂದಾವನದಲ್ಲಿ ನೀ ನಿಂತು | ವನಿತೆ ಸುತಧನ ಮನೆ ಮೊದಲಾಗಿಹ | ಅನುಪಮ ಇಷ್ಟಾರ್ಥ ಅನುದಿನದಲಿ ಇತ್ತು | ಜನರ ಪಾಲಿಸಗೋಸುಗ ಹರಿಯು ನಿನಗೆ | ಜನುಮಕೊಟ್ಟಿಹನೋ ಈಗ || ಅವಕೆ ನಿನ್ನ ಜನರು ಭಜಿಪರೊ ವೇಗ | ತಿಳಿದು ನಾನು ಅನುದಿನ ತವ ಪಾದ | ವನಜ ನಂಬಿದೆ ಪೇಗ || ೭ || ರಕ್ಷಿಸೋ ನೀ ಎನ್ನ ಲಕ್ಷ್ಮೀ ರಮಣ ದೂತ | ಮೋಕ್ಷಾದಿ ಪುರುಷಾರ್ಥಪೇಕ್ಷ ಪ್ರದಾಯಕ | ಲಕ್ಷ ಜನ ರೊಳೆನ್ನ ವೀಕ್ಷಿಸಿ ಪರಜನ | ಪೇಕ್ಷಾ ಮಾಡದಂತೆ ಕುಕ್ಷಿಯೊಳಗಿದ್ದು | ಲಕ್ಷ್ಮೀಶ ನಾತ್ಮಜ ಭಿಕ್ಷಾನ್ನ ಬೇಡೋದು | ಲಕ್ಷಣವೇನಿದು ಪೇಕ್ಷಮಾಡದೇ ನೀ ಎನ್ನ || ಕಾಯಲಿ ಬೇಕು | ವೀಕ್ಷಿಸಿ ಜ್ಞಾನವನ್ನ | ಭಕುತಿಯಿತ್ತು ರಕ್ಷಿಸುಯೆಂದೆ ನಿನ್ನ | ಇದೇ ವಂದಾಪೇಕ್ಷ ಪೂರ್ತಿಸೊ | ಕಲ್ಪ | ವೃಕ್ಷ ನೀ ಎನಗೆ ಇನ್ನ || ೮ || ಕಿಟಿಜ ನರಿದ್ವರ ತಟಕೃತ ಮಂದಿರ | ಚಟುಲ ಮಧ್ವಮುನಿ ಪಟುಶಾಸ್ತ್ರ ದಿಂದಲಿ | ಕುಟಿಲ ದುರ್ವಾದಿಗಳ ಘಟನೆ ಮುರಿದು ನಿಜ | ಚಟುಲ ಸಿದ್ಧಾಂತವ ಭಟ ಜನರಿಗೆ ಸದ | ಘಟನೆ ಮಾಡಿ ಪ್ರತಿ ಭಟರಿಲ್ಲದಲೆ ನೀನು | ಧಿಟನಾಗಿ ತ್ರಿಜಗದಿ ಮೆರೆಯುತ

ಮಹ ಶತಜನರನು ತ್ವರದಿ ॥ ಮುರಿದು ಜ್ಞಾನಿ। ಕಟಿಕಸುಪಾಲನದಿ। ಪಟೋಯೆನಿಸಿ । ಧಿಟಗುರು ಜಗನ್ನಾಥ ವಿಠಲನ್ನ ಭಜಿಪದಿ ॥ ೯ ॥

### ೧೦೧ ಪದ—ರಾಗ—ಸುರಟಿ—ತಾಳ ಏಕ.

ರಾಘವೇಂದ್ರ ಗುರು ರಾಯಾ ನೀವೇಗದಿ ಪಿಡಿಯೆನ್ನ ಕೈಯ್ಯಾ ॥ ಪಲ್ಲ ॥ ಆಗಮ ಸಂಚಿತ ಭೋಗಗಗಳುಳ್ಳ ಭವಸಾಗರವಲ್ಲಿ ಬಿದ್ದೆ ಬ್ಯಾಗನೇ ನೀ ಬಂದು ॥ ಅನು ಪಲ್ಲ ॥ ಭಾವನ್ರನ್ಯಕ್ರೀಯನಾ ದ್ವೈತ । ಇವರನುಭಾವವ ತಿಳಿಯುವೆ ನಿರುತ । ಸೇವಿಪ ಸಂತತ ಈ ವಿಧ ನರರನು । ದೇವರೆಂದೆನ-ದಿನ ಭಾವಿಸಿವೆನ್ನನು ॥ ೧ ॥ ಅಶನವಸನಕಾಗಿ ನಾ । ಪರವಶದಲಿ ಶಿರಬಾಗಿ । ಅಪಮ ನಿನ್ನಯ ಪಾದ ಬಿಸಿಜ ಭಜಿಸದೆ ನಾ । ವಸುಮತಿಯೊಳು ಬಲು ಹಸನಗೆಟ್ಟೆನ್ನನು ॥ ೨ ॥ ಸಿರಿವರ ಗುರು ಜಗನ್ನಾಥ। ವಿಠಲನ್ನ । ಪರಿಸರವರ ನಾಥ । ಸರಿಯೆನಿಸಿದ ನಿನ್ನ ಪರಿಚರರೊಳು ಎನ್ನ । ಮರಿಯದೆ ದಯದಲಿ ಪೊರೆವೊದು ಎನ್ನನು ॥ ೩ ॥

### ೧೦೨ ಪದ—ರಾಗ—ಕಾಂಬೋದಿ—ತಾಳ ಝಂಪೆ

ಅಲ್ಪ ಮಾನವರಿಗಾಲ್ಪರಿಪಬ್ಯಾಡಲೋ ಗುರುಪೆ ॥ ಪಲ್ಲ ॥ ಕಲ್ಪಕಲ್ಪದಲಹಿತಲ್ಪ ಹರಿಯ ಸಂಕಲ್ಪವನು ಸರಸಿ । ನಡಿವೋ ಸ್ವಾಮಿ ॥ ಕಲ್ಪತರು ನೀನೆಂದು ಮನದಲ್ಲಿ ಸ್ವಲ್ಪವಾದರು । ವಿಕಲ್ಪನಾಗದವನ ॥ ೧ ॥ ನಿನ್ನ ಧ್ಯಾನವಗೈದು ನಿನ್ನ ಸೇವಿಯು ಮಾಡಿ। ನಿನ್ನ ಪದ ಪದುಮವಾಶ್ರಯುವ ಮಾಡಿ॥ ಮನ್ನದಲಿ ಭಜಿಸುತ ನನ್ನ ಶರಣನು ಯೆನಿಸಿ । ಅನ್ಯಜನರನು ಯಾಚಿಸದಿಪ್ಪ ನರನ ॥ ೨ ॥ ನಿನ್ನ ಧ್ಯಾನವ ಬಿಟ್ಟು ನಿನ್ನ ಭಜನ ತೆಜಿಸಿ । ನಿನ್ನ ನಾಮಸ್ಮರಣೆ ಮಾಡದೆ । ಅನ್ಯ ದೇವರಸೇವೆ । ಮನ್ನಪೂರ್ವಕ ಮಾಡಿ ಬನ್ನ ಬಡುತಿಹ್ಯರೊ ಭವದೊಳಗೆ ಇಂಥ ॥ ೩ ॥ ಮಧ್ವ ಮತದಲಿ ಪುಟ್ಟಿ ಮಧ್ವ ಶಾಸ್ತ್ರವ ಬಿಟ್ಟು ।ಮಧ್ವ ಮತವನು

ಪೊಂದದೆ ‖ ಮಧ್ವದ್ವೇಷವ ಬಳಸಿ । ಮಧ್ವದ್ರೋಹವ ಪಡದಿರುವಂಥ ‖ ೪ ‖ ನಾಥ ನಿನ್ನಯ ಪಾದ ಪಾಥೋಜ ಯುಗವನು । ಪ್ರೀತಿ ಪೂರ್ವಕ ಭಜಿಪ ಜನರ ‖ ಯ್ಯೂಥದೊಳಗಿನ್ನಿಟ್ಟು ಪೊರೆಯೊ ಸಿ । ದಾತ ಗುರು ಜಗನ್ನಾಥ ವಿಠಲಪ್ರೀಯಾ ‖ ೫ ‖

## ೧೦೩ ಪದ—ರಾಗ—ರೇಗುಪ್ತಿ—ತಾಳ ತ್ರಿಪುಟೆ

ಶರಣ ಜನರ ತನ್ನ ಕರುಣದಿಂಪಲಿ ಕಾಯ್ವ । ಕರುಣಾ ಸಾಗರನ ನೋಡಿರೈ ‖ ಪಲ್ಲ ‖ ತರುಣಾರ್ಕನಿಭ ಸುಪರಣ ವಾಹನ ಗುಣ । ವರಣನ ಮಾಡುವ ಕರಣ ಹೀನಾಂಶನ ‖ ಉ. ಪ. ‖ ನಾನ ವಿಧದ ಫಲ ದಾನ ಮಾಡುವ ಸುರ । ಧೇನು ನಿನಗೆ ನೋತು ಪೋಯಿತಯ್ಯಾ । ಮಾನ ನಿಧಿಯೆ ಎನ್ನ । ನೀನೆ ಕಾಯೆನುತನುರಾಗದಿ ಸಂಬಿದೆ ನಿನ್ನ ನೇವದಿರತನ ಮಾಡೊಯೋಗದಿ । ನಾ ನಿನ್ನ ಪದಕಭಿನಮಿಸಿ ಬೇಡುವೆನಯ್ಯ । ಮಹರಾಯ । ಕರಪಿಡಿದು ಕಾಯೋ । ನೀ ಎನ್ನ ಗುರು ರಾಯ ‖ ಹೀನ ಭವದೊಳಗೆ ಬಾಯ ಬಿಡುವೆ ನಾನಯ್ಯ । ಇವಕೇನುಪಾಯ । ನೀನೆ ಚಿಂತಿಸು ಸಂತರೊಡಿಯನೆ ನಾನು ಬಲ್ಲೆನೆ ಮೂಢ ಮಾನವ । ದೀನಜನ ಮಂದಾರ ಶಾಶ್ವಿತ । ದಾನಿ ನಿನಪದ ಧ್ಯಾನ ಮಾಡಿಸೊ ‖ ೧ ‖ ಸೇವಕ ಜನರನ್ನ ಕಾಪೋನೀತನು ಯೆಂಬೊ । ಭಾವ ಪೂರ್ವಕ ನಿನ್ನ ಸೇವಿಪೆನೋ । ಅವ ಕಾಲದಿಂದ ಭಾವಿಸೀ ಬ್ಯನ್ನ ಕಾರ್ಯ ಮಾಡುವ । ಕರುಣದಲೆನ್ನ ನೋಡುವ ಸೇವಕ ನಿಷ್ಟನೀಡುವ । ನೀ ನಿರಲು ನಿತ್ಯ ಆವ ಭಯವೇನು ಎನಗಿಲ್ಲ । ನಂಬಿದರೆ ಕೈ ಬಿಟ್ಟು ಪೋಗುವ ನೀನಲ್ಲ । ದೇವ ದಾನನರಂಜಿಕೆಯು ಎನಗಿಲ್ಲ । ಈ ಮಾತು ಪುಶಿಯಲ್ಲ । ಜೀವರುತ್ತಮ ಮುಖ್ಯವಾಯು । ದೇವನಾವೇಶದಿಂಪಲಿ । ದೇವ ಭಾವವ ನೈದಿ ಲೋಕದಿ । ಈ ವಿಧದಿ ಮಹಿಮವ ತೋರಿ ಮೆರವ ‖ ೨ ‖ ಪಾತಕವನಕುಲ ವೀತಿಹೋತ್ರನು ಯೆನಿಸಿ । ದೂತ ಜನರಾಘ ದೂರಗೈಸುವ । ದಾತಗುರು ಜಗನ್ನಾಥ ವಿಠಲಗತಿ ಪ್ರೀಯನು । ಎನಗೆ ನಿಜ ಜೀಯನು । ದೂತಜನಕತಿ ಪ್ರೀಯನು । ತಾನೆನಿಸಿ । ವೀತ ಭಯ ಭೂತಾದಿ ಬಾಧೆ ಕಳೆವ । ಸತಿ

ಯರಿಗೆ ಸುತರನ್ನು ಕೊಡುವ । ಈತ ನೀಡುವ ನಹಿಕ ಪರಲೋಕ ಸುಖ । ಜಾತರೂಪ ಸುಶಯ್ಯ । ತನಯ ದೂತನಾದವಗೆ ಸುಭಯ ನಿರ್ಭೀತನಾಗಿ ದೆಲ್ಲ ಕಾರ್ಯವ ನೀ । ತೆರದಿ ತಾ ಮಾಡುತಿರುವಾ ॥ ೩ ॥

## ೧೦೪ ಪದ—ರಾಗ—ರೇಗುಪ್ತಿ—ತ್ರಿವಿಡಿ ತಾಳ

ಕಂಡೆ ಗುರುರಾಯನಾ । ಸುರಮನೋ ಪ್ರಿಯನ ।ಪಲ್ಲ। ತೋಂಡವ ತ್ಸಲಜಾ। ದಂಡಕಮಂಡುಲ ಕರ। ಪಂಡಿತಾಗ್ರಣಿಯೊಳು ದ್ದಂಡ ಮಹಿಮರ ॥ ಪಲ್ಲ ॥ ಧೃತ ನಾಮ ಮದ್ರೆಸು ಫಾಲವ । ಗಂಧಾಕ್ಷತಿ ಮಾಣಿಕವಂತೆ ಪೋಲುವ । ವೃತತಿ ಜಾಂಬಕ ಯುಗ । ಯುತ ಸಂಪಿಗಿ ನಾಸವ । ಲಲಿತ ಭ್ರೂಯುಗ ವಿಲಾಸವ ॥ ಕಪೋಲಯುಗಳ ಭಾಸವ । ವದನದೊಳೊಪ್ಪುವ ಕಿರಿಹಾಸವ ॥ ೧ ॥ ಕುಂದ ಕುಟ್ಮಲರದನಾವಳಿಯಾ । ಪವಳಸಂದ ಲಿಹ್ಯಾಧರ ಕಳೆಯ । ಕಂಜರಾಂಕಿತ ತುಲಸಿ । ಮಂದ ಜಾಂಬಕ ಸುಮಾಲೆಯ । ಕಂಠತ್ರೀ ರೇಖಕಾಂತಿಯ । ಶುಂಡೋಪಮ ಬಾಹುಶಾಲಿ ಯಾ । ಜಪಮಾಲಾ ಶೋಭಿಪ ಪಾಣಿಯ ॥ ೨ ॥ ಸದಮಲ ವಾದ ಹೃದಯ ಮಂಡಲವಾ । ಹರಿ । ಸದನನಂದದಿ ನಿತ್ಯ ಪೊಳೆವ ॥ ಪಮುಮಾದಿ ಪಂಚಮುದ್ರಿ ನಿತ್ಯಚಿನ್ಹಿತ ನಾಮುವ । ಉರದಿ ರೋಮ ಶೋಭವ । ಪೊಟ್ಟೆಯೊಳು ತ್ರಿವಳಿ ಭಾಸವ । ಸುಳಿಗುಂಭ ನಾಭಿ ಗಂಭೀರವ ॥ ೩ ॥ ಅರುಣೋಪಮ ಕಾವಿಶಾಟಿಯಾ ನುಟ್ಟು । ಶಿರದಿ ಪೊದ್ದಾಂಬರ ರುಚಿಯಾ। ಕರ(ರಿ)ಭೋಪ ಮೋರು ಜಾನು ಮುಕುರ ಬಿಂಬವಾ॥ ಶ್ರಿತ ಜನತತಿ ಗಭೀಷ್ಟವಾ । ನೀಡುವೊ ಮಹಿಮ ವಿಶಾಲವ । ನಿರುತ ತಾ । ಮಾಳ್ಪ ವಿಡಂಬನವ ॥ ೪ ॥ ಪಾಥೋಜೋಪಮ ಜಂಘೆಗಳ। ವೆರಡು ಜಾತಿ ರತ್ನಾಂಗುಲಿ ಸಂಘಗಳ । ಜೋತಿಮಯ ಪಾರಿಜಾತ ಸಮಪಾದವ । ಸೇವಿ ಪರಿಗಮರ ಸಾಲವ । ಸುಜನತತಿಗುಲ್ಲಾಸವ । ಗುರು ಜಗ । ನ್ನಾಥ ವಿಠಲ ಲೀಲವ ॥ ೫ ॥

೧೦೫ **ಪದ—ರಾಗ—ನಾದ ನಾಮಕ್ರಿಯ—ತಾಳ ಏಕ**

ನೋಡಿದೆ ಗುರು ರಾಯರನ್ನ ] ಈ ರೂಢಿಯೊಳಗೆ ಮೆರವ ಸಾರ್ವಭೌಮನ್ನ ॥ ಪಲ್ಲ ॥ ಥಳಥಳಿಸುವ ವೃಂದಾವನದಿ ] ತಾನು ಕುಳಿತು ಭಕ್ತರಿಗೀವ ] ವರವನು ತ್ವರದಿ ] ನಳಿನ ನಾಭನ ಕೃಪಾಬಲದಿ ] ಇದೆ ನಳಿನ ಜಾಂಡದಿ ಸರಿಗಾಣೆ ಮಹಿಮಾದಿ ॥ ೧ ॥ ಪೊಳೆವ ವಕ್ಷಸ್ಥಳದವನ ] ಎಳೆ ತುಲಸಿ ಮಾಲಾಂಕಿತ ಕಂಧರ ಯುತನ / ನಳಿನಾಕ್ಷಿಮಾಲೆ ಶೋಭಿತನ ] ಉರ ] ಚಲುವದ್ವಾದಶ ಪುಂಡ್ರ ಮುದ್ರಚಿಹ್ನಿತನಾ ॥ ೨ ॥ ಕೃಷ್ಣವರ್ಣದಿ ಸುಶೋಭಿತನ । ಮಹ ವೈಷ್ಣವ ಕುಮುದ ನಿಕರಕೆ ಚಂದಿರನ ] ವಿಷ್ಣು ಭಕ್ತಾಗ್ರೇಸರನ ] ಬಾಲಕೃಷ್ಣ ಮೂರುತಿ ಪಾದ । ಯುಗ ಸರೋಜ ಇನ ॥ ೩ ॥ ದಿನ ನಾಥ ದೀಪ್ತಿ ಭಾಸ್ಕರನ । ಭವ ] ವನಧಿ ಸಂತರಣ ಸುಪೋತ ಕೋಪಮನ ॥ ಮುನಿಜನ ಕುಲದಿ ಶೋಭಿಪನ । ಸ್ತ್ರೀಯಾ ಜನರ ಪಾಲಕ ಮಹರಾಯನೆನಿಪನಾ ॥ ೪ ॥ ಗುರು ಜಗನ್ನಾಥ ವಿಠ್ಠಲನ । ಪಾದ ಸರಸಿಜಯುಗಳ ಕಾರಡಿಯೆನಿಪನ ] ಪೊರಿಪೊನು ತನ್ನ ಜನರನ್ನ ] ಯೆಂದು ] ಸಿರಸದಿ ನಮಿಸಿಬೇಡಿವೆ ಗುರು ವರನ ॥ ೫ ॥

೧೦೬ **ಪದ—ರಾಗ—ಶಂಕರಾಭರಣ—ತಾಳ ತ್ರಿವಿಡಿ**

ನಂಬಿ ತುತಿಸಿರೊ ರಾಘವೇಂದ್ರ ಧ್ವರಿಯಾ ॥ ಸನ್ಮುನಿಕುಲವರ್ಯ ॥ಪಲ್ಲ॥ ಅಂಬುಜನಾಭನಿಗತಿ ಪ್ರೀಯಾ । ಸಜ್ಜನರಿಗೆ ಸಹಯ ॥ ಉ. ಪ ॥ ಕನಕಶಯ್ಯನಾ ತನುಜನಾಗಿ ಜನಿಸಿ । ನರಹರಿಯನು ಪೊಲಿಸಿ । ಅನುಜರಿಗನುದಿನ ತತ್ವವ ತಾಕಲಿಸಿ ] ಪರಮತವನು ಜೈಸಿ । ಮನದಲಿ ಶ್ರೀ ಹರಿಪದವನ್ನೇ ಭಜಿಸಿ ] ವರಕರುಣವ ಸಲಿಸಿ । ವನಜಭವಾಂಡದಿ ಬಹು ಬಲ್ಲಿದನೆನಿಪ । ನತ ಜನರಿಗೆ ಸುರಪ ॥ ೧ ॥ ಕಾಮಧೇನು ಸುರತರುವಿಗೆ ಸಮನೀತ । ಕಾಮಿತ ಫಲದಾತ ] ರಾಮ ನರಹರಿ ಕೃಷ್ಣರ ಪದದೂತ ।

ಲೋಕದಿ ಬಹುಖ್ಯಾತ । ಕಾಮಿನಿ ಸುತ ಧನ ಧಾನ್ಯದ ವ್ರಾತ । ನೀಡುವ್ರೊನತಿ ಪ್ರೀತ ಪ್ರೇಮದಿ ನಿಜ ಜನಸ್ತೋಮಕೆ ಬಹುದಾತ । ಯತಿವರ ಕುಲ ನಾಥಾ ॥ ೨ ॥ ಪಾತಕ ವನಕುಲ ವೀತಿ ಹೋತ್ರ ನೆನಿಸೀ । ಸುಖ ವಸು ಸರಿಸಿ । ಭೂತಪ್ರೇತ ಮಹ ಭೀತಿಯ ಬಿಡಿಸಿ । ರೋಗವ ಪರಿಹರಿಸಿ ಮಾತ ಪಿತರ ತೆರ ದೂತರ ರಕ್ಷಿಸಿ । ಮನೋಚಿಂತಿಯನೆ ಬಿಡಿಸಿ । ದಾತ ಗುರು ಜಗನ್ನಾಥ ವಿಠಲ ಪದದೂತ । ನಿಜಜನರಿಗೆ ತಾತ ॥ ೩ ॥

## ೧೦೭ ಪದ—ರಾಗ—ಅಸಾವೇರಿ—ತಾಳ ಏಕ.

ಎದ್ದು ಬರುತಾರೆ ನೋಡೆ ತಾವೆದ್ದು ಬರುತಾರೆ ನೋಡೆ । ಮುದ್ದು ವೃಂದಾವನ ಮಧ್ಯದೊಳಗಿದ್ದು । ತಿದ್ದಿ ಹಚ್ಚಿದ ನಾಮ ಮುದ್ರಿಗಳೊಪ್ಪುತೀಗ ॥ಉ.ಪ.॥ ಗಳದೊಳು ಶ್ರೀ ತುಲಸಿ ನಳಿನಾಕ್ಷಿಮಾಲಿಯು । ಚಲುವ ಮುಖದೊಳು ಪೊಳೆವೊ ದಂತಗಳಿಂದ ॥ ೧ ॥ ಹೃದಯಾ ಮಂದಿರದಲ್ಲಿ ಪದುಮನಾಭನ ಭಜಿಸಿ । ಮುದ ಮನದಲಿ ನಿತ್ಯ ಸದಮಲರೂಪ ತಾಳಿ ॥ ೨ ॥ ದಾತಾ ಗುರು ಜಗನ್ನಾಥ ವಿಠಲನ್ನ । ಪ್ರೀತಿಯು ಬಡಿಸುತ । ದೂತರ ಪೊರೆಯುತ ॥ ೩ ॥

## ೧೦೮ ಪದ—ರಾಗ—ಶಂಕರಾಭರಣ—ತಾಳ ಏಕ.

ಎಂತು ಬಣ್ಣಿಸಲೆ ಮ್ಮಯ್ಯ । ಈ ಗುರುವರರ ॥ ಪ ॥ ಎಂತು ಬಣ್ಣಿಪೆನಾ । ನಂತನಾಂಶ ಜಗ । ದಂತರದೊಳಗಾನಂತ ಮಹಿಮರ ॥ ಉ. ಪ. ॥ ಸುರವರ ನಗರ ಸಮ । ವರಮಂತ್ರ ಸದನವನ್ನು । ಜರಿದು ತ್ವರದಿ । ವಿರಪಾ ಪುರದಿ ನಿಂತ ಮಹಿಮರನ್ನ ॥ ೧ ॥ ಪೂರ್ವಯುಗದಿ ಸರ್ವರಾಜ । ಸಾರ್ವ ಭೌಮರೆನಿಸಿ ಈಗ । ಪಾರ್ವರನ್ನ ಪೊರೆವೊದಕ್ಕೆ । ಪೂರ್ವ ಯತಿ ಯೆನಿಸಿಹರನ್ನ ॥ ೨ ॥ ದಿನದಿನದಲ್ಲಿ ಮಹಕನಕಾಭಿಷೇಕ

ಮಾಳ್ಪ ಧನಿಕರನ್ನ ತ್ಯಜಿಸಿ ನಿ ] ರ್ಧನಿಕ ಗೊಲಿದದನ್ನ ॥ ೩ ॥ ಕ್ಷೀರಶೇಚನ ನಿತ್ಯ । ಸಾರ ಪಂಚಾಮೃತ ಬಿಟ್ಟು । ಕೀರುತಿಯು ಮಾಳ್ಪ ಜನರ ಸೇರಿಕೊಂಡಿರುವೊರನ್ನ ॥ ೪ ॥ ದಾತರೆನಿಸಿ ಜಗದಿ ಬಹು ] ಖ್ಯಾತರಾಗಿ ಗುರು ಜಗ । ನ್ನಾಥ ವಿಠ್ಠಲ ನೊಲಿಸಿ । ನಿಜದೂತ ಜನರ ಪೊರಿವೊರನ್ನ ॥ ೫ ॥

## ೧೧೯ ಪದ—ರಾಗ—ಭೈರವಿ—ತಾಳ ತ್ರಿವಿಡಿ.

ದಾತ ಸನ್ಮುನಿಗಣ ] ನಾಥ ಕಾಮಿತ ಕಲ್ಪವೃಕ್ಷ । ಆಶ್ರಿತಜನ ದಕ್ಷ ॥ ಪಲ್ಲ ॥ ಧಾತ ಮೊಗ ಸುರಮುನಿಯ ಸಂತತಿ ] ಪ್ರೀತಿಪೂರ್ವಕದಿಪ್ಪ ಕಾರಣ । ಜೋತಿ ವೃಂದಾವನದಿ ತಾ ನಿ । ರ್ಭೀತ ಮಹಿಮೆಯು ತೋರ್ಪ ಜಗದಿ ॥ ಉ. ಪ. ॥ ಭಿಕ್ಷುನಾಯಕ ಸರ್ವಾಪೇಕ್ಷದಾಯಕ ನೆಂಬ ಬಿರಿದು। ನೆಂಬ ಬಿರಿದು ಪ್ರೊತ್ತಿಹ ತಾನರಿದು] ಲಕ್ಷ್ಮೀರಮಣನ ಪಾದ ಪದುಮವ ] ವಕ್ಷೋಮಂದಿರದೊಳಗೆ ತಾನಪ । ರೋಕ್ಷಕರಿಸಿ ಸರ್ವ ಜನರಾ । ಪೇಕ್ಷ ಪೂರ್ತಿಸಿ ಮೆರೆವ ಗುರುವರ ॥ ೧ ॥ ದಂಡ ಕಾಷಾಯಕ ಮಂಡಲ ಧರ ಹಂಸರೂಪ ] ಅಮಿತ ಸುಪ್ರತಾಪ । ತೋಂಡ ಜಲ ಜೋತ್ಫುಲ್ಲಕರ। ಮಾರ್ತಾಂಡ ಸನ್ನಿಭನೆನಿಪ ತ್ರಿಜಗೆ ।. ನ್ಮಂಡಲಾನತ ಸುಜನ ಮನ್ಮನೋ] ಪುಂಡರೀಕ ನಿವಾಸ ನಿರ್ಮಲ ॥ ೨ ॥ ಕಿಟಿಜ ಸರಿದ್ವಾರ ತಟವಾಸ ಗುರು ಜಗನ್ನಾಥ । ವಿಠಲ ಗುಣಗಾಥಾ । ತಟನಿಲಾಹರಿ ಮಧ್ಯತನ ಹೃ। ತ್ಪುಟ ಸುನಾವೆಯು ಮಾಡಿ । ಅಟನಗೈವೊ ಜಗದಿ ರಾಜಿಪ ಚಟುಲ ವಿಕ್ರಮ ಕರುಣ ಸಾಗರ ॥ ೩ ॥

## ೧೧೦ ಪದ—ರಾಗ—ಶಂಕರಾಭರಣ—ತಾಳ ಏಕ

ಆರಾಯರ ಪದ ನೀರಜ ಯುಗ ಮನೊ ] ವಾರಿಜದಲಿ ನಾ ಭಜಿಸುವೆನು ॥ ಪಲ್ಲ ॥ ಸಾರಿದ ಜನರಘ ದೂರದಿ ಓಡಿಸಿ । ಧಾರುಣಿಯೊಳು

ಸುರ । ಸೌರಭಿ ಯೆನಿಸಿಹ ॥ಉ. ಪ. ॥ ಆವರ ಪದಜಲ ಈ ಭುವನತ್ರಯ ಪಾವನತರ ವೆಂದಿನಿಸುವದೊ । ಆವರ ಪದಯುಗ ಕೋವಿದ ಜನರು । ಭಾವದಿ ದಿನ ದಿನ ಸೇವಿಪರೊ ॥ ಆವರ ಹೃದಯದಿ ನಾರೆಯಣ ಚಕ್ರಾಪ ತಾರವ ಧರಿಸಿಹ್ಯನೋ । ಶ್ರೀವರ ಹರಿ ಕರುಣಾವಲೋಕನದಿ । ದೇವ ಸ್ವಭಾವವನೈದಿಹರೊ ॥ ೧ ॥ ಅವವಾಸವ ನಿವರ ಚರಣ ಸೇವಕ ತೆರ ನೆಂದಿಸುವನೊ । ಭಾವಿಪರವನೀತಳದೊಳು ಮತ್ತೆ । ಕೋವಿದ ಜನರೆಲ್ಲರು ಅವನ ॥ ಧೀವರನಾದರು ಅವನೇ ಅವನೀ । ದೇವೋ ತ್ತಮ ನೆಂದೆನಿಸುವನು । ಪಾವನಿ ಮುಖ ದೇವೋತ್ತಮ ರೆಲ್ಲ । ಈ ವಿಧ ಮಹಿಮೆಯ ತೀವ್ರದಿ ತೋರುವ ॥ ೨ ॥ ಆವರು ಅವನಿ ದೇವತಿಗಳಿಗೆ ಜೀವನನಿತ್ತು ಪೊರದಿಹರೊ । ಪಾವನ (ಕ) ಘಾಕಿದ ಹಾರವ ಮತ್ತೆ । ಭೂವರನಿಗೆ ತಂದಿತ್ತಿಹರೊ । ಮಾವಿನ ರಸದಲಿ ಬಿದ್ದಿಹ ಶಿಶುವಿಗೆ । ಜೀವನನಿತ್ತು ಕಾಯ್ದಿಹರೊ । ಶೈವನ ನಿಜ ಶೈವವ ಬಿಡಿಸಿ ತಮ್ಮ । ಸೇವೆಯನಿತ್ತು ಸಲಿಸಿಹರೊ ॥ ೩ ॥ ಸಲಿಲವ ತಂದಿರು ತಿಹ ನರನಿಗೆ । ಸುಲಲಿತ ಮುಕ್ತಿಯ ನಿತ್ತಿಹರೊ । ಚಲುವ ತನಯನಾ ಪುಲಿನದಿ ಪಡದಿಹ । ಲಲನೆಯ ಚ್ಛಲದಿ ಕಾದಿಹರೊ । ಸಲಿಲವು ಯಿಲ್ಲದೆ ಬಳಲಿದ ಜನರನು । ಸಲಿಲವ ನಿತ್ತು ಸಲಿಸಿಹರೊ । ಇಳಿಯೊಳು ಯತಿ ಕುಲ ತಿಲುಕರೆಂದೆನಿಸಿ । ಸಲಿಸದಂಥದು ತಾವು ಸಲಿಸಿಹರೊ ॥ ೪ ॥ ಅನುದಿವದಲಿ ತಮ ಪದಕಮಲವನು । ಮನದಲಿ ಬಿಡದೆ ಭಜಿಸುವರ । ಜನರಿಗೆ ನಿಜ ಘನಸುಖವನು ಕೊಟ್ಟವ । ರನು ಸರಿಸಿ ಇರುತಿಹ್ಯರಾ । ಮನೊವಾಕ್ಕಾಯದಿ ನಂಬಿದ ಜನಕೆ । ಜನುಮವನ್ನು ನೀಡರು ಇವರ । ಘನ ಗುಣನಿಧಿ ಗುರು ಜಗನ್ನಾಥ ವಿಠಲ । ನನುಗಾಗ್ರೇಸರರೆನಿಸಿಹರ ॥೫॥

## ೧೧೧ ಪದ—ರಾಗ—ಮಧ್ಯಮಾವತಿ—ಏಕತಾಳ

ಇಂದು ನೋಡಿದೆ ನೇದ ದಾಯಕ ಮುನೀಂದ್ರ ವಂದಿತ ಪಾದನಾ ॥ ಪಲ್ಲ ॥ ವಂದನೀಯ ಶುಭೋರು ಗುಣಗಣ । ಸಾಂದ್ರ ಗುರು ರಾಘ

ವೇಂದ್ರನ ॥ ಉ. ಪ ॥ ವೇದ ತತಿಶತ ಮೋದಗಿತ್ತನ । ನಾದಿ ಮತ್ಸ್ಯನ ತೆರದಲಿ । ವೇದ ವಾದವ ಶೋಧ ಮಾಡಿ ಮೇದಿನೀಸುರಗಿತ್ತನಾ ॥ ೧ ॥ ಕಮಠ ರೂಪದಲವ.ರ ತತಿಗೆ । ಅಮೃತ ನೀಡಿದ ತೆರದಲಿ ॥ ಸ್ವಮತ ಸುಧಿಯನು ಪ್ರಮಿತಗಿತ್ತಿಹ । ಅಮಿತ ಸುಮಹಾ ಮಹಿಮನ ॥ ೨ ॥ ಧರಣಿ ಮಂಡಲ ಧುರದಿ ದಾಡಿಲಿ । ಧರಿಸಿ ತಂದನ ತೆರದಲಿ । ಧರಣಿ ಜನ ರಿಗೆ ಧರೆಯು ಮೊದಲಾದ । ಪರಮಭೀಷ್ಟಿಯನಿತ್ತು ಪೊರೆವನ ॥ ೩ ॥ ದುರುಳದಿತಿಜನ ತರಿದು ನಿಜಸುವ । ತರುಳಪಾಲನ ತೆರದಲಿ ॥ ದುರಿತ ರಾಶಿಯ ತರಿದು ತನ್ನಯ ಶರಣಜನ ಪರಿಪಾಲನ ॥ ೪ ॥ ಬಲಿಯ ಯಜ್ಞದ ತಳದಿ ಭೂಮಿಯ । ನಳದ ರೂಪನ ತೆರದಲಿ ॥ ಖಳರ ಪಂಚಕ ತನ್ನ ತಿಳಿ ವಗೆ ಸುಲಭದಿಂದಲಿ ಪೊಲಿವನ ॥ ೫ ॥ ದುಷ್ಟಕ್ಷತ್ರಿಯ ನಷ್ಟ ಕುಲವನು । ನಷ್ಟಗೈದನ ತೆರದಲಿ ॥ ಕೆಟ್ಟ ರೋಗವು ಶ್ರೇಷ್ಠ ಭೂತದ । ಅಟ್ಟುಳಿಯನೆ ಕಳೆವನ ॥ ೬ ॥ ಜನಕನಾಜ್ಞಾದಿ ವನವ ಚರಿಸಿದ । ಇನಕುಲೇಶನ ತೆರ ದಲಿ । ಜನರಿಗೀಪ್ಸಿತ ತನಯ ಮೊದಲಾದ ಮನದಪೇಕ್ಷವ ನೀಡೊನಾ ॥ ೭ ॥ ಕನಲಿ ದ್ರೌಪದಿ ನೆನಿಸಲಾಯಿತೆ । ಕ್ಷಣಕೆ ಬಂದನ ತೆರದಲಿ । ಮನದಿ ತನ್ನನು ನೆನೆದ ಜನರನು । ಜನುಮ ಜನುಮದಿ ಪೊರೆವನ ॥ ೮ ॥ ಮುದ್ದು ಸತಿಯರ ಬುದ್ಧಿ ಗೆಡಿಸಿ ಗೆದ್ದು ಬಂದನ ತೆರದಲಿ ॥ ಮುದ್ದು ಮತಿ ಯನು ತಿದ್ದಿ ಭಕುತಿಗೆ । ಶುದ್ಧ ಜ್ಞಾನವ ನೀಡೊನಾ ॥ ೯ ॥ ಕಲಹ ಕಂಟಕ ಕಲಿಯ ವೈರಿ ಕಲಿಕಿ ರೂಪನ ತೆರದಲಿ ॥ ಹುಳಕ ಮನವನು ಕಳದು ತನ್ನಲಿ ಹೊಳಿಪೊ ಮನವನು ಕೊಡುವನಾ ॥ ೧೦ ॥ ನೀತ ಗುರು ಜಗನ್ನಾಥ ವಿಠ್ಠಲ । ಭೂತಳಕ್ಕಧಿನಾಥನು ॥ ಆತನೆಂತ್ರೈತಿನಾಥ ಜಗಕ ಪ್ರೀತಿ ಶುಭಫಲದಾತನಾ ॥ ೧೧ ॥

### ೧೧೨. ಪದ—ರಾಗ—ರೇಗುಪ್ತಿ—ತಾಳ—ಏಕ.

ವೃಂದಾವನದಲಿ ನಿಂತ ಸುಯತಿವರನ್ಯಾರೆ । ಪೇಳಮ್ಮಯ್ಯ ॥ಪಲ್ಲ॥ ವಂದಿಪ ಜನಕಾನಂದ ಕೊಡುವೊ । ರಾಘವೇಂದ್ರ ಮುನಿವರ ನೀತ

ನೋಡವ್ಮ ॥ ಉ ಪ ॥ ಇಂದಿರೆ ರಮಣನ ಛಂದದಿ ಭಜಿಸ್ಯಾನಂದ ದಲಿಹ್ಯ ನಾರೆ ॥ ಪೇಳವ್ಮಯ್ಯಾ । ನಂದ ತೀರ್ಥಮತ ಸಿಂಧುವರೆಗೆ ಬಾಳೆಂದು ನೆನಸಿಹನ್ಯಾರೆ ಪೇಳವ್ಮಯ್ಯಾ ॥ ಮಂದಜಭವ ಹರಿ । ಕುದು ಗೊರಳನೊಂದೆಂಬರ । ನಳಿದಿಹನಾರೆ ॥ ಪೇ ॥ ಒಂಪೆ ವ್ಯಾಸಮುನಿ ಯೆಂದು ಕರೆಸಿ ರಾಘ । ವೇಂದ್ರ ಗುರುವರನೀತ ನೋಡವ್ಮ ॥ ೧ ॥ ನತಿಸುವ ಜನರಿಗೆ ಸತಿ ಸುತರನು ಬಲು । ಹಿತವಲಿ ನೀಡುವನ್ಯಾರೆ ॥ಪೇ॥ ಪ್ರತಿದಿನ ತನ್ನನು ಮತಿಪೂರ್ವಕ ಬಹು । ತುತಿಪರ ಪಾಲಿಪನ್ಯಾರೆ । ॥ ಪೇ ॥ ಮತಿಯುತ ಪಂಡಿತ ತತಿ ಯಭಿಲಾಷವ । ಸತತ ಪೂರ್ತಿಪ ನ್ಯಾರೆ ಪೇಳವ್ಮಯ್ಯ ॥ ಕ್ಷಿತಿ ಸುರರಿಗೆ ಸದ್ಗತಿ ದಾಯಕ ಮಹ । ಯತಿ ಕುಲವರ ಗುರುರಾಯ ಕಾಣವ್ಮ ॥ ೨ ॥ ಮಾತೆಯು ಸುತರಲಿ ಪ್ರೀತಿಲಿ ಗೊಳಿಸುವ । ತಾತನ ತೆರದಿಹನ್ಯಾರೆ । ಪೇಳವ್ಮಯ್ಯ । ಪ್ರೇತನಾಥ ಮಹ ಭೂತ ಗಣಂಗಳ ಭೀತಿಯ ಬಿಡಿಸುವನ್ಯಾರೆ । ಪೇಳವ್ಮಯ್ಯ । ಭೂತಳ ಜನಕೃತ ಪಾತಕ ಕಾನನ । ಜಾತವೇದನತೆರನ್ಯಾರೆ ಪೇಳವ್ಮಯ್ಯ । ದಾತ ಗುರು ಜಗನ್ನಾಥ ವಿಠಲ ನಿಜ । ದೂತ ಜನಕೆ ಮಹದಾತ ಕಾಣೆವ್ಮ ॥ ೩ ॥

## ೧೧೩ ಪದ—ರಾಗ—ಬೆಹಾಗ್—ತಾಳ ಏಕ

ದಯಾನಿಧೆ ಶ್ರೀ ರಾಘವೇಂದ್ರ ಗುರುವೆ । ಕಾಮಿತ ಸುರತರುವೆ ॥ ಪಲ್ಲ ॥ ಧರಾತಳದಿ ಸುರ ತರುವರೋಪಮ । ತ್ವರಾದಿ ಎನ್ನನು ಪೊರಿಯೊಗುರುವರ ॥ ೧ ॥ ಗಡಾನೆ ತವಪದ ಜಡಾಜ ಭಜಿಸುವ ಧೃಡಾ ಮತಿಯ ಕೊಡು ಒಡೇಯ ಗುರುವರ ॥ ೨ ॥ ಎಷ್ಟು ಪೇಳಲೆನ್ನ ಕಷ್ಟ ರಾಶಿಗಳನ್ನು । ಸುಟ್ಟು ಬಿಡೋ ಸರ್ವೋತ್ಕೃಷ್ಟ ಮಹಿಮ ಗುರು ॥ ೩ ॥ ಮೋಕ್ಷದಾಯಕನ್ನಾಪೇಕ್ಷಿಸಿ ಮನೋಗತಾ । ಪೇಕ್ಷಾವ ಪೂರೈಸೊ । ತ್ರ್ಯಕ್ಷಾದಿ ಸುರ ಪ್ರೀತ ॥ ೪ ॥ ದಾತಾನೆ ನೀ ಎನ್ನ ಮಾತು ಲಾಲಿಸಿ ನಿತ್ಯ । ನೀತಗುರು ಜಗನ್ನಾಥ ವಿಠ್ಠಲ ಪ್ರಿಯ ॥ ೫ ॥

## ಶ್ರೀ ರಾಯರ ಶಾರದಾ ಪ್ರಾರಂಭ

### ೧೧೪ ಪದ—ರಾಗ—ಆನಂದ ಭೈರವಿ—ತಾಳ ಝಂಪಿ

ಶ್ರೀ ರಾಘವೇಂದ್ರರಾಯಾ ಎನ್ನ ಭವ ಭಾರ ನಿನ್ನದೊ ಜೀಯ್ಯಾ । ದೂರ ನೋಡದಲೀಗ ಕೈಯ್ಯ । ಪಿಡಿದು ನೀ । ನಾರಿಗರೆಯೊ ಸುರಧೇಯಾ ॥ ೧ ॥ ನಿನ್ಹೊರತು ಗತಿಯಾರೊ ಎನಗೆ । ಈಗ । ನಿನ್ನನೇ ತೋರಯ್ಯ ಎನಗೆ । ಬಿನ್ನಪವ ಮಾಳ್ಪೆನಾ ನಿನಗೆ ಭವದಿ ಬನ್ನ ಬಡುವನ ನೋಡಿ ಹೀಗೆ ॥ ೨ ॥ ಈಸು ವತ್ಸರವ್ಯರ್ಥ ಕಳೆವೆ । ನಾ ನಿನ್ನ ದಾಸನಾಗದೆ ಭವದಿ ಮೆರದೆ । ಎನ್ನ । ಈಶ ನೀನೆಂಬದನು ಮರದೆ । ಬಹು । ಕ್ಲೇಶ ಬಟ್ಟೆ ಪರಿಯನುಳದೆ ॥ ೩ ॥ ಗುರುವರನೆ ನಿನ್ನಂಘ್ರಿ ಕಮಲ । ಯುಗಕೆ । ನಾಕರ ಮುಗಿದು ಬೇಡಿವೆನೋ । ವಿಮಲ । ಸರಸ ವಿಜ್ಞಾನ ಭಕುತಿತ್ತು ಮೂಲ ನೀನಿತ್ತು ಪೊರೆಯೊ ನೀ ಭಕ್ತವತ್ಸಲ ॥ ೪ ॥ ಏನು ಕರುಣಾಸಿಧಿಯೋ ನೀನು । ಜಗದೊಳಗೆ । ದೀನರುದ್ಧರಿಪ ನೀಯೆಂದು । ನಾನು ರಾಗದಿ ಭಜಿಪೆನೊ ತವ ಚರಣ । ಧ್ಯಾನ ಪಾಲಿಪದೀಗ ಸುಪರ್ಣವಹನ । ಶ್ರೀನಿವಾಸನೆ ತಾನೆ ನಿನ್ನಾಧೀನ ॥ ೫ ॥ ವಿಷಯಾಶೆ ಬಿಡಿಸೊ ಸ್ವಾಮಿ । ಎನಗೆ ತಾ । ವಿಷಿಯು ಪತಿಯು ನಲಿಸೊ ಪ್ರೇಮಿ । ಕೃಷಿಯಾದಿ ಸತಿ ಸುತರ ಕಾಮಿ । ಯೆನಿಸಿ । ತೃಷೆಯುಗೊಂಡೆನೊ ಅಂತರಿಯಾಮಿ ॥ ೬ ॥ ನರರ ಯಾಚನೆ ಮಾಡನಲ್ಲ । ದೇಶವನು । ತಿರತಿರಗಿ ನಾ ಬಂದೆನಲ್ಲ । ಪರಿಪರಿಯ ಭವಣೆ ಸುಳ್ಳಾಗದಲ್ಲ । ಸರ್ವಜ್ಞ ಸರ್ವ ನೀ ತಿಳಿದಿರುವಿಯೆಲ್ಲ ॥ ೭ ॥ ನೀಚ ಜನ ಮನೆ ಮನಿಗೆ ಪೋಗಿ ನಾನು । ಯಾಚಿಪೆನೊ ನಾಚಿಕೆಯು ನೀಗಿ ॥ ಯೋಚನಿಲ್ಲದೆ ನಾನು ಕೂಗಿ । ಈಗ । ನೀಚನಾದೆನು ಕಾಯೊ ಪರಮ ಯೋಗಿ ॥ ೮ ॥ ಶೇಷಾದ್ರಿ ನಿಲಯನಿವಾಸ । ಎನ್ನಯ ದೋಷ ರಾಶಿಯ ತರಿಯುಲೇಶ । ವಾಸವಾಗೆಲೊ ಮನದ ತೋಷ । ಪೂರೈಸೊ । ದಾಸಜನ ಪ್ರಿಯ ಯೋಗಿಶಾ ॥ ೯ ॥ ಪೋತ ನಿನಗೆ ನಾನಲ್ಲೆ ಜೀಯ್ಯಾ । ಎನಗೆ ತಾತ ನೀನೆಂಬೊ ಮಾತು ಖರಿಯಾ ॥ ಮಾತು ಲಾಲಿಪದು ನಿನ ಕ್ರೀಯಾ । ಗುರು ಜಗನ್ನಾಥ ವಿಠಲಗೆ ನೀನೆ ಪ್ರೀಯಾ ॥ ೧೦ ॥

## ೧೧೫ ಪದ—ರಾಗ—ಕಾಂಬೋದಿ—ತಾಳ ಅಟ್ಟ

ನೀ ಎನ್ನ ಕಾಯಲಿಬೇಕೊ ಘನ್ನ ಮಹಿಮಾ ‖ ಪ ‖ ಎನ್ನ ನೀ ಪರಿಪರಿ ಬನ್ನ ಬಡಿಸುವ ದನ್ಯಾಯು ನಿನಗಿದಾವನ್ನವಾಲ ‖ ಅನು ಪಲ್ಲ ‖ ಘನ್ನ ಮಹಿಮೆ ತೋರಿ ಎನ್ನ ಕಾಯಲಿಬೇಕೊ ] ನಿನ್ನೊಬ್ಬರತು ಗತಿ ಎನಗ ಮುನ್ನಾರು ಗುರುವೆ ‖ ೧ ‖ ಎನ್ನ ಮಾತನು ನೀನು ಚನ್ನಾಗಿ ಚಿತ್ತೈಸಿ ] ಅನ್ಯ ಜನರ ಕಣ ಬಾಧೆ ಕಳದು ‖ ಘನ್ನಸಿರಿ ಕೃಷ್ಣನು ] [ ತ ] ನಿನ್ನ ಸಖನಿಗೆ ಮಹ। ಉನ್ನತೈಶ್ವರ್ಯ ವಿತ್ತುವನನ್ನ ಕಾಯ್ದ ತೆರದಿ ‖ ೨ ‖ ಇನ್ನು ಪೇಳುವ ದೇನು ಗುರುರನ್ನ ಭವಶ್ರಮುವು ] ನಿನ್ನ ಗರುವಿಲ್ಲವೆ ಸರ್ವಜ್ಞರಾಯ ‖ ಸನ್ನುತ ಪ್ರೀಯಾ ನಿನ್ನಗೆ ಮೊರೆ ಇಡುವೆ। ಘನ್ನ ಗುರು ಜಗನ್ನಾಥ ವಿಠಲನ ದೂತಾ ‖ ೩ ‖

## ೧೧೬ ಪದ—ರಾಗ—ಧನ್ಯಾಸಿ—ತಾಳ ಆದಿ

ಯಾತರಂಜು ಗುರು ನಾಥನಪದ ಯುಗ ದೂತನಾದವಂಗೆ ‖ಪಲ್ಲ‖ ಮಾತ ಪಿತೃ ಸತಿಸುತರೆಲ್ಲರೂ ಪ್ರೀತಿಬಡದೇ ಕೋ ] ಪಾತಿಶಯದಿರಲಿ ನ್ಯಾತರಂಜು ‖ ಉ. ಪ ‖ ಧೊರೆತನ ಮಾಡುವ ಧೊರೆಗಳು ತನ್ನೆ ದೂರದಿ ಮಾಡಿದರೇನು । ಘೋರಿತ (ಪ) ಭವಬಾಧಿಯು ನಿತ್ಯಾ। ಮ್ಯಾರೆದಪ್ಪಿ ಬರ ಲೇನು ] ನಾರಿದ ಜನರನು ಪಾರು ಮಾಡುವನು ] ದಾರ ಮಹಿಮನ ಚಾರನಾದವಗೆ ‖ ೧ ‖ ಶಿಷ್ಟನಾಗದಲ ಶಿಷ್ಟನೆನಿಸಿ । ಭ್ರಷ್ಟರ ಸಂಗವ ಮಾಡಿದರೇನು । ನಿಷ್ಠೆಯಿಂದ ಸಿರಿಕೃಷ್ಣನ ಭಜಿಸದಲೆ ಇಷ್ಟು ನೀಚನೆನಿ ಸಿದರೇನು ‖ ದುಷ್ಟ ಕರ್ಮ ತನ ದೃಷ್ಟಿಲಿ ತರಿವಾ ] ಇಷ್ಟ ಗುರುಪದ ನಂಬಿದ ನರಗೆ ‖ ೨ ‖ ಪಾತಕಿಯೊಳಗತಿ ಪಾತಕಿಯಾಗಿ ] ಪಾತಕ ದಿನ ದಿನ ಮಾಡಿದರೇನು ] ಮಾತ ಪಿತರು ತನ ಭ್ರಾತರ ದ್ರೋಹವ ] ನೀತ ವಾಗಿ ಮಾಡಿದರೇನು ‖ ದಾತ ಗುರು ಜಗನ್ನಾಥ ವಿಠ್ಠಲನ ] ಪ್ರೀತಿ ಪಡೆದ ಗುರು ನಾಥನ ಚರಗೆ ‖ ೩ ‖

|| ಶ್ರೀ ಗುರುರಾಜೋ ವಿಜಯತೆ ||

### ೧೧೭ ಪದ—ರಾಗ—ಮೋಹನ ಕಲ್ಯಾಣಿ—ತಾಳ ಆದಿ.

ಗುರು ರಾಜ ಗುರು ಸಾರ್ವಭೌಮ || ಪಲ್ಲ || ಗುರು ರಾಜ ಗುರು ಸಾರ್ವಬೌಮ ನಿನ್ನಯ ಪಾದೆ | ಸರಸಿಜಯುಗಕಭಿನಮಿಸುವೆ || ೧ || ಕರುಣ ಸಾಗರನೆಂದು ಚರಣವ ನಂಬಿದೆ | ಶರಣನ ಪಾಲಿಸು ಕರುಣಿಯೋ || ೨ || ಅನ್ಯರ ಭಜಿಸದೆ ನಿನ್ನನೆ ಭಜಿಸುವೆ | ಎನ್ನ ಮರವೋದಿದು ನ್ಯಾಯುವೆ || ೩ || ಪರಮ ಪುರುಷನೆ ನಿನ್ನನುಚರನೆನಿಸಿ ಧರೆಯೊಳು ನರ ನನ್ನ ಬೇಡುವದು ಘನತಿಯೆ || ೪ || ಸುರಧೇನು ಮನೆಯಲ್ಲಿ ಸ್ಥಿರವಾಗಿ ಇರಲಿನ್ನು | ತಿರಕ ತಕ್ರಕೆ ಬಾಯಿ ತೆರವೊರೆ || ೫ || ಬೇಡಿವ ಮನೋರಥ ನೀಡುವ ನೀನಿರೆ | ಬೇಡೆನೆ ನರರನ್ನ ನೀಡೆಂದು || ೬ || ಸಂತತ ಎನ ಕಾರ್ಯವಂತರಿಲ್ಲದೆ ನೀ | ನಿಂತು ಮಾಡುವುದು ಪುಶಿಯಲ್ಲ || ೭ || ಕಾಲಕ್ಕಸುಖ ದುಃಖ ಮೇಲಾಗಿ ಬರುತಿರೆ | ಪೇಳಿ ಎನ್ನನು ನೀ ಪಾಲಿಪೆ || ೮ || ನಿನ್ನ ಸೇವಿ ಪರಿಗೆ ಇನ್ನುಂಟೆ ಭಯ ಶೋಕ | ಉನ್ನತ ಸುಖದೊಳಗಿರುವರೊ || ೯ || ನಿನ್ನ ಸೇವಿಸಿ ಭವಬನ್ನ ಬಡುವದಿದು | ಎನ್ನಪರಾಧವದೇನಯ್ಯಾ || ೧೦ || ಕುಚ್ಛಿತ ಜನರನ್ನ ತುಚ್ಛ ಮಾಡದಲವರ | ಇಚ್ಛೆ ಕಾರ್ಯವ ಮಾಡಿ ಸಲಿಸುವಿ || ೧೧ || ಜನನಿ ಪುತ್ರಗೆ ವಿಷ ವಿನಯದಿ ನೀಡಲು | ಜನಕ ತನಯನ ತಾ ಮಾರಲು || ೧೨ || ವಸುಧೀಶ ವೃತ್ತಿಯ ಕಸಕೊಂಡ ಪಾರ್ತಿಯ | ವ್ಯಸನದಿ ಆರಿಗೆ ಉಸರೋದು || ೧೩ || ಇದರಂತೆ ನೀ ಮಾಡುವುದು ಏನು ನ್ಯಾಯವೊ | ಪದುಮನಾಭನ ಪ್ರೀಯ ಗುರುರಾಯ || ೧೪ || ಮೂಕ ಬಧಿರ ಕುರುಡಾನೇಕ ಜನಕೆ ಕಾರ್ಯ ವಿ | ವೇಕ ಮಾಡಿ ನೀ ಸಲಹಿದಿ || ೧೫ || ಬಂದು ಬೇಡಿದ ಮಹಾವಂಧ್ಯ ಜನ ರಿಗೆ ಸು | ಕಂದರ ನೀನಿತ್ತು ಸಲಹು ವೀ ||೧೬ || ಭೂತಾದಿ ಬಾಧವ ನೀ ತರಿದು ಸುಖಗಳ | ವ್ರಾತವ ಸಲಿಸಿ ಪಾಲೀಸುವಿ || ೧೭ || ಹಿಂದಿನಮಹಿ ಮದ ದಿಂದೆನು ಎನಗೈಯ್ಯ | ಇಂದು ಮಹಾಮಹಿಮೆ ತೋರಿಸೊ ||೧೮||

ನಾಥನು ನೀನಲ್ಲೆ ದೂತನು ನಾನಲ್ಲೆ । ಯಾತಕೆ ಈ ತೆರ ಮಾಡಿದೀ ॥ ೧೯ ॥ ಎಲ್ಲೆಲ್ಲಿ ನಾ ಪೋದರಲ್ಲೆಲ್ಲಿ ನೀ ಬಂದು । ಎಲ್ಲ ಕಾರ್ಯಗಳನ್ನು ಮಾಡಿದಿ ॥ ೨೦ ॥ ಇತರರಿಗಸಾಧ್ಯ ಅತಿಶಯ ಚರ್ಯವ ಯತನಿಲ್ಲದಲೆ ನೀ ಮಾಡಿದಿ ॥೨೧॥ ಪೇಳಲೆನ್ನೊಶವಲ್ಲ ಭಾಳು (ಬಹಳು) ನಿನ್ನ ಚರ್ಯ ] ಕೇಳು ಮಾನವ ನಾಬಲ್ಲಿನೆ ॥ ೨೨ ॥ ಜ್ಞಾನಿಗಳರಸನೆ । ಮೌನಿ ಶಿರೋಮಣಿ ] ಧ್ಯಾನವ ಸಂತತ ನೀಡಯ್ಯ ॥ ೨೩ ॥ ಸಂತತ ಎನ ಮನೊ ಅಂತರದಲಿ ನೀ । ನಿಂತು ಪಾಲಿಸೊ ಎನ್ನ ಮಹರಾಯ ॥ ೨೪ ॥ ಎಂಥೆಂಥ ಭಯ ಬರೆ ನಿಂತು ಕಳದ್ಯೋ ದಯ ವಂತ ನಿನಗಾ ರೆಣೆ ಗಾಣೆನ್ಯೆಯ್ಯಾ ( ನಿನಗಾರು ಎಣೆ ಗಾಣೆ ) ॥ ೨೫ ॥ ನಿನ್ನಲ್ಲಿ ಹರಿದಯ ಉನ್ನತ ಇರಲಿನ್ನು ] ಎನ್ನಲ್ಲಿ ನಿನದಯ ಇರಲೆಯ್ಯಾ ॥ ೨೬ ॥ ದಾತ ಗುರು ಜಗನ್ನಾಥ ವಿಠ್ಠಲ ನಿನ್ನ । ಮಾತು ಲಾಲಿಸಿದಂತೆ ಪೊರಿ ಎನ್ನ ॥ ೨೭ ॥

೧೧೪ **ಪದ--ರಾಗ—ಮಧ್ಯಮಾವತಿ—ಏಕತಾಳ**

ರಥವಾನೇರಿದ ಶ್ರೀಗುರುವರ್ಯ ಕೃತ ಸಚ್ಚರ್ಯಾ ॥ ಪ ॥ ಪೃಥ್ವಿ ವಿತಳವಲಪ್ರತಿ ಮಹಿಮವ ನತ ಜನರಿಗೆ ತೋರಿ ಮನೋ ] ರಥ ಪೂರ್ತಿಪೆ ನೆಂದು ॥ ಉ. ಪ. ॥ ದಿನದಿನ ಸೇವಾಸಕ್ತರಾ ಮಾಡುವ ಜನರ ] ಮನದ ಚಿಂತೆಯ ಪರಿಹಾರ । ಗೈವುತ ಧೀರ । ಅನಿಮಿಷ ತರುತೆರ ಉದಾರ । ಸದ್ಗುಣ ಗಂಭೀರ । ತನುಮನಿ ಧನವನಿತೆ ಸುತಕೃಷಿ । ಜನ ರಿಗೆ ಈ ಪರಿ ಘನನೀಡುವೆನೆನುತ ॥ ೧ ॥ ಹಿಂದೀನ ಮಹಿಮೆಗಳದ್ಭುತಾ ಅದರಿಂದೇನೆನುತ । ವಂದೀಪ ಜನರ ಹೃದ್ಗತ] ಪೂರೈಸುವೆನೆನುತ । ಇಂದು ಮಾಡಲು ಜನಕ ಹಿತ । ನಾಗುವ ಹರಿ ಪ್ರೀತ ॥ ನಂದಿತ ಸುಜ ನರ ಸಂದಣಿಯೊಳು ಮುನ । ದಿಂದಲಿ ನಲಿಯುತ । ಬಂದು ತ್ವರದಲಿ ॥ ೨ ॥ ಧಿಟ್ಟಾ ಶ್ರೀ ಗುರು ಜಗನ್ನಾಥ ವಿಠ್ಠಲ ದೂತ । ಸಿಷ್ಟೇಷ್ಟಾ ಭೀಷ್ಟಿಯದಾತಾ ತ್ರಿಲೋಕದಿಖ್ಯಾತ । ನಷ್ಟಾಯು ಮೊದಲಾದಖಿಳಾರ್ಥ ನೀಡುವೊ ಕೃತಾರ್ಥ ] ಸೃಷ್ಟಿಯೊಳಗ ಬಹುಶ್ರೇಷ್ಠರಾಗಿ ಕರುಣಾ ] ದೃಷ್ಟಿಲಿ ನೋಳ್ಪದು ಸಿಷ್ಟರ ಮತವೆಂದು ॥ ೩ ॥

## ಗುರು ಜಗನ್ನಾಥ ವಿಠಲ

### ೧೧೯ ಸುಳಾದಿ (೬) —ರಾಗ—ಭೈರವಿ—ಧ್ರುವತಾಳ

ಹರಿಯು ಉಂಡನ್ನ ನಮ್ಮ ಗುರು ರಾಘವೇಂದ್ರರಿಗೆ । ಪರಮ ಭಕುತಿಯಿಂದ ಅರುಪಿಸೊ ಬಗಿಯಾ । ಅರಿತು ನಿತ್ಯದಲ್ಲಿ ಪರಮ ಭಕುತರು ನೀಡೆ । ಪರಮಾದರದಲ್ಲಿ ಗುರು ಕೈಯ್ಯ ಕೊಂಬುವನು । ವರ ಯತಿಗನ್ನೋದಕ ಗಿರಿ ಸಾಗರ ಸಮವು । ಮರಳಿ ನೀಡೋದು ಜಲ ನಿರುತದಲ್ಲಿ । ವರ ಬ್ರಹ್ಮಚಾರಿಗಿಡೆ ಸರಿ ಯೆನಿಸುವ್ರೋದು ಫಲ । ವರ ಗ್ರಹಸ್ಥನಿಗಿತ್ತನ್ನ ಎರಡು ಎನಿಸುವೋದು । ವರವನಸ್ಥನಿಗಿಡೆ ವರಶತವೆನಿಸೋದು । ಪರಮಹಂಸರಿಗಿಡೆ ವರ ಅನಂತವಾಗುವ ದೈಯ್ಯ । ಅರಿತು ಈ ಪರಿಯಿಂದ ನಿರುತ ನೀಡುವದೈಯ್ಯ । ಗುರುವುಂಡ ಮನೆಯಲ್ಲಿ ಹರಿತಾನುಂಬುವೋನು । ಹರಿಯುಂಡ ಸ್ಥಳದಲ್ಲಿ ವರಬ್ರಹ್ಮಾಂಡ ಉಂಬೋದು । ವರಶಾಸ್ತ್ರ ಸಿದ್ಧವಿದು ಗುರುವಂತರ್ಯಾಮಿ ನಮ್ಮ । ಗುರು ಜಗನ್ನಾಥ ವಿಠಲ ಪರಮ ಹರುಷ ಬಡುವೊನು ॥ ೧ ॥

॥ ಮಟ್ಟ ತಾಳ ॥

ಅನ್ನ ಸಾಮಗ್ರದಲ್ಲಿ ಇಂದು ಕೇಶವ ಯೆನ್ನಿ । ಮುನ್ನೆ ಭಾರತಿ ಪರಮಾನ್ನ ನಾರಾಯಣ । ಇನ್ನು ಭಕ್ಷಕೆ ಸೂರ್ಯರನ್ನ ಮಾಧವ ಘೃತಕೆ । ಚನ್ನೆ ಲಕುಮಿ ಗೋವಿಂದನು ಎನ್ನಿ । ಮುನ್ನ ಕ್ಷೀರಕೆ ವಾಣಿ ಅನ್ನುವಿಷ್ಣು ದೇವ । ಘನ್ನ ಮಂಡಿಗಿ ಬ್ರಹ್ಮ ಇನ್ನು ಮಧುಘಾತಿ । ಬೆಣ್ಣೆಯಲ್ಲಿ ವಾಯು ಚನ್ನ ತ್ರಿವಿಕ್ರಮ । ಮುನ್ನೆ ದಧಿಯಲ್ಲಿ ಸೋಮ ವರುಣವಾಮ । ನನ್ನ ತಿಳಿ ಸೂಪ ಚನ್ನ ವೀಪ ಶ್ರೀಧರ । ಮುನ್ನ ಶಾಖಪತ್ರಸೊ ನ್ನಗದಿರಮಿತ್ರ । ಚನ್ನ ಹೃಷಿಕೇಶ ಇನ್ನು ಫಲದಲ್ಲಿ । ಘನ್ನ ಶೇಷನಲ್ಲಿ ರನ್ನಪದುಮನಾಭ । ಮುನ್ನೆ ಆಮ್ಲದಲ್ಲಿ ಸ್ವನ್ನಗೌರಿ ಅಲ್ಲಿ । ಅನ್ನು ದಾಮೋದರ ಅನ್ನಾಮ್ಲಪತಿ ರುದ್ರ । ಚನ್ನ ಜಯಾಪತಿಯು । ಮುನ್ನೆ ಶರ್ಕರಶತ । ಮನ್ನು ವಾಸುದೇವ । ಘನ್ನ ಮಹಿಮ ಗುರು ಜಗನ್ನಾಥ ವಿಠ್ಠಲ್ಲಪಾ । ವನ್ನ ಪದಯುಗ ಮನ್ನದೊಳಗ ನೆನಸುತಿರು ॥ ೨ ॥

|| ತ್ರಿವಿಡಿ ತಾಳ ||

ಪರಿಪರಿ ಉಪಸ್ಕಾರ ಪರಮೇಷ್ಟಿ ಪ್ರದ್ಯುಮ್ನ । ಅರಿವೋದು ಕಟು ಯುಮವರ ಅನಿರುದ್ಧನ್ನ । ವರ ಇಂಗು ಸಾಸಿವಿ ಏಳ ಮರೀಚಿ । ಜೀರಿಗಿ ಯಲ್ಲಿ ಕರ್ಪೂರ ಚಂದನಕೇ । ಶರ ಬಗೆ ಬಗೆ ವಿಧ ಪರಿಮಳದ್ರವ್ಯಕ್ಕನ್ಮರಸು ಪುರುಷೋತ್ತುಮ ದೇವನಸಿಪ್ಪ । ವರ ರಸ ಇತ್ಯಾದಿ ಘೃತ ತೈಲಪಕ್ವದಿ । ಇರುತಿಹಬುಧನಧೋಕ್ಷಜ ಮೂರುತಿ । ಸ್ಮರಿಸು ಕೂಷ್ಮಾಂಡತಿಲ ಮಾಷಸಂಡಿಗೆಯಲಿ । ವರವಕ್ಷ ನರಹರಿ ದೇವನ ನೆನಿಸು । ಇರುತಿಪ್ಪ ಮನು ಮಾಷ ಭಕ್ಷಅ । ಧ್ವರಕಾರ್ಯಕಚ್ಚುತ ಮೂರುತಿಯೋ । ಸುರಚಿಲವಣವಲ್ಲಿ ನಿರಯುತಿ ಜನಾರ್ದನ । ಇರುತಿಹ ಶಾಖ ಫಲ ರಸಕ ಪ್ರಾಣೋಪೇಂದ್ರ । ಪರಮ ಪುರುಷ ದೇವ ನಿಹನೆಂದು ತಿಳಿವೋದು । ವರ ತಾಂಬೂಲ ಗಂಗಾ ಹರಿನಾಮಾನಿರುವೋಸು । ಪರಸ್ವಾದೋದಕದಲ್ಲಿ ಇರು ತಿಪ್ಪ ಬುಧನಲ್ಲಿ । ಇರುತಿಹ ಕೃಷ್ಣದೇವ ಗುರು ಜಗನ್ನಾಥ ವಿಠಲ । ನರಿತು ನೀಡಲು ನಮ್ಮ ಗುರು ಕೈಯ್ಯ ಕೊಂಬೊನು || ೩ ||

|| ಅಟ್ಟ ತಾಳ ||

ಒಂದೊಂದು ಕವಳ ಗೋವಿಂದನ್ನ ಸ್ಮರಿಸುತ್ತ । ಇಂದು ನಿಭಾ ಭಕ್ಷ ಕವಳಕ್ಕೆ ಅಚ್ಯುತ । ನೆಂದು ಶಾಖ ಕವಳ ಧನ್ವಂತ್ರಿ ಸ್ಮರಿಸುತ್ತ । ಮುಂದೆ ಪರಮಾನ್ನ ಒಂದೊಂದು ಕವಳಕ್ಕ । ಅಂದು ವಿಷ್ಣು ಪಾಂಡುರಂಗನ ಸ್ಮರಿ ಸುತ್ತ । ಕುಂದಿಲ್ಲದ ಬೆಣ್ಣಿಯುಂಬ ಕಾಲದಲ್ಲಿ । ತಾಂಡವ ಕೃಷ್ಣನು ಧಧ್ಯಾನ್ನ ಕವಳ ಶ್ರೀನಿವಾಸ । ನೆಂದು ಸುತ್ತೈಲ ಘೃತ ಪಕ್ವಕೆ ವೆಂಕಟ । ನೆಂದು ಕದಲಿ ದ್ರಾಕ್ಷಿ ಖರ್ಜೂರ ದಾಡಿಮ । ಛಂದನಾರೀಕೇಳ ಚೂತ ಧಾತ್ರಿ ಜಂಬು । ಕಂದ ಮೂಲಫಲ ಭಕ್ಷಣಕಾಲಕ್ಕ । ನಂದನಂದನ ಬಾಲ ಕೃಷ್ಣನ ಸ್ಮರಿಸುತ್ತ । ಲ್ಲಿಂದ ಜಲಪಾನದಲ್ಲಿ ವಿಷ್ಣು ದೇವ । ನಿಂದಿರದೆ ವರ ತಾಂಬೂಲ ಕವಳದಲ್ಲಿ । ಸುಂದರ ಪ್ರದ್ಯುಮ್ನ ದೇವನ ಸ್ಮರಿಸುತ್ತ

ಲ್ಲಿಂದ ಆಪೋಶನ ದ್ವಯದಲ್ಲಿ ವಾಯುಸ್ಥ ಇಂದಿರಾ ರಮಣ ಮುಕುಂದನ ಧೇನಿಸಿ । ನಂದಾದಿ ಈ ರೀತಿ ಚಿಂತಿಸಿ ನೀಡಲು । ಸುಂದರ ಗುರು ರಾಘವೇಂದ್ರಂತರ್ಗತ ನಮ್ಮ । ಇಂದಿರಾಪತಿ ಗುರು ಜಗನ್ನಾಥ ವಿಠಲ ತಾ । ನಂದಾದಿ ಕೈಕೊಂಡು ಮನ್ನಿಸಿ ಪೊರೆವನು ॥ ೪ ॥

॥ ಆದಿ ತಾಳ ॥

ಅರಿತು ಈ ಪರಿಯಿಂದ ನಿರುತ ಹಸ್ತೋದಕ । ಗುರುಗಳಿಗರ್ಪಿಸೆ ತ್ವರಿತದಿ ಕೈಕೊಂಡು । ಪರಮ ಸುಖವಿತ್ತು ಪರಿಪಾಲಿಪರಿಹ್ಯ । ಪರದಲ್ಲಿ ಇವರಿಗೆ ಬರುವ ದುರಿತ । ತರಿದು ಪೊರೆವರು ಯಿಲ್ಲವೊ ಇವರನ ಬಿಟ್ಟರೆ । ಹರಿಯು ಅಲ್ಲವೆ ಮತ್ತನ್ಯರು ಆರೈ । ಹರಿತಾ ಮುನಿಯೆ ಗುರುಗಳು ಕಾಯುವರು । ಗುರುಗಳು ಮುನಿಯೇ ಹರಿತಾ ಕಾಯನು । ವರಶಾಸ್ತ್ರ ಪುರಾಣವು ಪೇಳೋದು । ಗುರುವೆ ತಾಯಿತಂದಿ ಗುರುವೆ ಮಮದೈವ । ಗುರುವೆ ಪಾರವಾರ ಗುರುವೆ ಗತಿನೀತ । ಗುರುವೆ ಪಾಲಿಸೆಂದು ಗುರುಗಳ ಭಜಿಸೆ । ಗುರುವು ದೊರೆತರೆ ಹರಿತಾ ದೊರೆವನು । ಗುರುವು ಮರೆತರೆ ಹರಿತಾ (ಮ) ವೊರೆವನು । ಗುರುಗಳ ಪಾದ ಶಿರ ವರಿಯಂತ ಸ್ಮರಿಸಲು । ಪಾಪ । ಪರಿಹಾರವಾಗೋದು ಗುರುವಂತರ್ಗತ ನಮ್ಮ । ಗುರು ಜಗನ್ನಾಥ ವಿಠಲ ಪರಮ ಹರುಷ ಬಡುವೋನು ॥ ೫ ॥

॥ ಜತೆ ॥

ಚಿಂತಿಸಿ ಪದಾರ್ಥ ಇಂತು ನೀಡಲು ಗುರು । ಅಂತಗ ಗುರು ಜಗನ್ನಾಥ ವಿಠ್ಠಲ ಕೊಂಬ ॥ ೬ ॥

ನಂದ ನಂದನ ಶ್ಯಾಮಸುಂದರ ಎಂಬೊ ಧಾಟಿ.

## ೧೨೦ ಮಂಗಳಪದ ಅಟ್ಟತಾಳ

ಸ್ವಸ್ತಿ ಶ್ರೀ ಜಯಮಂಗಳಂ ॥ ಪಲ್ಲ ॥ ಸ್ವಸ್ತ ಚಿತ್ತದಿ ಹರಿಯ ಭಜಿಪಗೆ । ಹಸ್ತಿ ವರದನ ದಾಸವರ್ಯಗೆ । ಹಸ್ತದಿಂದ ಅಖಿಳಾರ್ಥ ದಾತಗೆ । ಸ್ವಸ್ತಿಕರ ಗುರು ರಾಘವೇಂದ್ರಗೆ ॥ ೧ ॥ ನತಿಪಜನ ಸುರಧೇನು

ಯೆನಿಪಗೆ । ಸತತ ಸ್ವಾಶ್ರಿತ ಪಾಲಗೆ । ವಿತತ ಸನ್ಮತಿ ದಾತಖ್ಯಾತಗೆ। ತುತಿಪರನುದಿನ ಪೊರೆಪೊ ನಾಥಗೆ ॥ ೨ ॥ ಪಾತಕಾಂಬುಧಿ ಕುಂಭ ಜಾತಗೆ । ಪಾತಕಾದ್ರಿ ಕುಲಶರೂಪಗೆ । ದಾತ ಗುರು ಜಗನ್ನಾಥ ವಿಠಲಗೆ। ದೂತ ಜನಗತಿ ಪ್ರೀತಗೆ ॥ ೩ ॥

## ಜೋಗುಳ ಪದ

### ೧೨೧ ಪದ—ರಾಗ—ಶಂಕರಾಭರಣ—ಅಟ್ಟ ತಾಳ

ತೂಗಿರೆ ರಾಯರ ತೂಗಿರೆ ಗುರುವರರ । ತೂಗಿರೆ ಯತಿಕುಲ ತಿಲಕರ ॥ ತೂಗಿರೆ ಯೋಗೇಂದ್ರ ಕರಕಮಲ ಪೂಜ್ಯರ । ತೂಗಿರೆ ಗುರು ರಾಘವೇಂದ್ರರ ॥ ಪಲ್ಲ ॥ ಕುಂದಣಮಯವಾದ ಛಂದ ತೊಟ್ಟಿ ಲೊಳಾ । ನಂದದಿ ಮಲಿಗ್ಯಾರ ತೂಗಿರೆ ॥ ನಂದ ನಂದನ ಗೋವಿಂದ ಮುಕ್ಕುಂದನಾ । ನಂದದಿ ಭಜಿಪರ ತೂಗಿರೆ ॥ ೧ ॥ ಯೋಗ ನಿದ್ರೆಯನ್ನೆ ಬ್ಯಾಗನೆ ಮಾಡುವೊ ಯೋಗೀಶ ವಂದ್ಯರ ತೂಗಿರೆ । ಭೋಗಿಶಯನನ ಪಾದ ಯೋಗದಿ ಭಜಿಪರ । ಭಾಗವತರನ್ನ ತೂಗಿರೆ। ನೇಮದಿ ತನ್ನನು ಕಾಮಿಪ ಜನರಿಗೆ ಕಾಮಿತ ಕೊಡುವರ ತೂಗಿರೆ ॥ ಪ್ರೇಮದಿ ನಿಜ ಜನರ ಆಮ[illegible]ವನುಕೂಲ । ಧೂಮಕೇತೆನಿಪರ . ತೂಗಿರೆ ॥ ೩ ॥ ಅದ್ವೈತ ಮತದ ವಿಧ್ವಂಸನ ನಿಜಗುರು । ಮಧ್ವಮತೋದ್ಧರರ ತೂಗಿರೆ ॥ ಸಿದ್ಧ ಸಂಕಲ್ಪದಿ ಬದ್ಧ ನಿಜಭಕ್ತರ । ಉದ್ಧಾರ ಮಾಳ್ಪರ ತೂಗಿರೆ ॥ ೪ ॥ ಭಜಕ ಜನರ ಭವ ತ್ಯಜನ ಮಾಡಿಸಿ ಅವರ । ನಿಜಗತಿಯಿಪ್ಪರ ತೂಗಿರೆ ॥ ನಿಜ ಗುರು ಜಗನ್ನಾಥ ವಿಠಲನ್ನ ನಿಜ । (ಪದ) ಕಂಜ । ಭಜನೆಯ ಮಾಳ್ಪರ ತೂಗಿರೆ ॥ ೫ ॥

### ೧೨೨ ಪದ –ರಾಗ—ಆನಂದ ಭೈರವಿ—ತಾಳ ಆದಿ.

ಲಾಲಿ ಪದ

ಸ್ವಾಮಿ ಲಾಲಿ ಭಕ್ತಪ್ರೇಮ ಲಾಲಿ । ಕಾಮದೆನಿಪ ಗುರು ಸಾರ್ವ ಭೌಮಲಾಲಿ ॥ ಪಲ್ಲ ॥ ಇಂದ್ರ ಲಾಲಿ । ರಾಘವೇಂದ್ರ ಲಾಲಿ । ಸಾಂದ್ರ

ಭಕ್ತ ಕುಮುದ ಪೂರ್ಣ । ಚಂದ್ರ ಲಾಲಿ ॥ ೧ ॥ ತರಣಿ ಲಾಲಿ । ನಿಜ] ಕರುಣಿ ಲಾಲಿ । ಶರಣ ಜನರ ಕಾವೊ ಗುಣ ಪೂರ್ಣ ಲಾಲಿ ॥ ೨ ॥ ದೇವ ಲಾಲಿ । ನಿಜ] ಭಾವ ಲಾಲಿ । ಭಾವಿಸುವರ ನಿತ್ಯ ನೀ । ಕಾವ ಲಾಲಿ ॥ ೩ ॥ ರಾಜ ಲಾಲಿ] ಕಲ್ಪ] ಭೋಜ ಲಾಲಿ । ರಾಜಿಸುವ ಯತಿಕುಲತೇಜ ಲಾಲಿ ॥ ೪ ॥ ದಾತ ಲಾಲಿ । ನಿಜ । ತಾತ ಲಾಲಿ । ಪ್ರೀತ ಗುರು ಜಗನ್ನಾಥ ವಿಠ್ಠಲ ದೂತ ಲಾಲಿ ॥ ೫ ॥ ಶ್ರೀಮಧ್ವೇಶ ಕೃಷ್ಣಾರ್ಪಣಮಸ್ತು ॥

## ಶ್ರೀ ಗುರು ಜಗನ್ನಾಥ ವಿಠಲ

### ೧೨೩ ಶ್ರೀರಾಯರ ಮುಖ್ಯ ಪದ ಪ್ರಾರಂಭ

ಶ್ರೀರಸ್ತು ಓಂಹರಿಃ ( ಕೋಲು ಪದದ ಧಾಟಿ )

ಹರಿಯೇ ಸರ್ವೋತ್ತಮ ಸಿರಿಯೇ ಆತನ ರಾಣಿ] ಪರಮೇಷ್ಠಿ ಮರುತರು ತನಯಾರು ಕೋಲೆ ॥ ಪರಮೇಷ್ಠಿ ಮರುತರು ತನಯಾರು ಈರ್ವರ] ಅರಸೇರು ವಾಣೀ ಭಾರತೀ ಕೋಲೆ ॥ ೧ ॥ ಗರುಡಾಹಿಪ ಮೃಡ ಮೂವೋರು ಮೊಮ್ಮೋರು । ಅರಸೀಯರೆನಿಪಾ ಸೌಪರ್ಣಿ ಕೋಲೆ ॥ ಅರಸೇರು ಎನಿಪ ಸೌಪರಣಿ ವಾರುಣಿ] ಗಿರಿರಾಜ ಪುತ್ರಿ ಪಾರ್ವತಿ ಕೋಲೆ ॥ ೨ ॥ ಪಾಕಶಾಸನ ಮುಖ್ಯಾನೇಕ ದಿವಿಜ ಗಣ । ಏಕ ಚಿತ್ತದಿ ನಮಿಸೂವೆ ಕೋಲೆ ॥ ಏಕ ಚಿತ್ತದಿ ನಮಿಸುವೆ ಗಂಧರ್ವ ಧರಣಿಪಾ] ಲಾಕರಾ ಸ್ತುತಿಸಿ ನಮಿಸುವೇ ಕೋಲೆ ॥ ೩ ॥ ಗುರು ರಾಯರ ಮಹಿಮೆ ತಿಳಿದಷ್ಟು ಪೇಳುವೆ । ಗುರು ಪಾದ ಭಜಕರರಿವೋದು ಕೋಲೆ ॥ ಗುರು ಪಾದ ಭಜಕರರಿವೋದು ನಮ್ಮ ಸಿರಿ] ಗುರು ರಾಜ ಪ್ರೀತನಾಗುವ ಕೋಲೆ ॥ ೪ ॥ ಗುರುರಾಜ ನಂಶ ಆವೇಶ ಅವತಾರ] ಆರುಹುವೇ ಸಾಧು ಜನರಿಗೆ ಕೋಲೆ ॥ ಆರುಹುವೇ ಸಾಧು ಜನರಿಗೆ ಸಮ್ಮತ] ಹರಿದಾಸ ಜನರಿಗೆ ಮುಖ್ಯವು ಕೋಲೆ ॥ ೫ ॥ ಶೇಷಾಖ್ಯ ವಿಷ್ವಕ್‌ಸೇನಾಭಿಧಾನದಿ । ಕೀಶೇಶ ನಾವೇಶ

ಯುತನಾಗಿ ಕೋಲೆ ॥ ಕೀಶೇಶ ನಾವೇಶಯುತನಾಗಿ ಭಾರ ] ತೀಶನ ಸುತನಾಗಿ ಜನಸಿದ ಕೋಲೆ ॥ ೬ ॥ ಹರಿಪಾದ ಸೇವೆಯ ಪರಿಪರಿ ಮಾಡುತ । ಪರಮಾ ವೈಕುಂಠ ಪುರವಲ್ಲಿ ಕೋಲೆ । ಪರಮಾ ವೈಕುಂಠ ಪುರ ವಲ್ಲಿ ದಿನ ದಿನ । ಪರಮಾ ಹರುಷದಿ ಇರುತಿರೆ ಕೋಲೆ ॥ ೭ ॥ ಆದಿ ದೈತೇಯರ ಬಾಧಿಗಾರದೇ ತ್ವರ ] ವೇಧ ಮೊದಲಾದ ಸುರರೆಲ್ಲ ಕೋಲೆ ॥ ವೇಧ ಮೊದಲಾದ ಸುರರೆಲ್ಲ ಪಯೋ ನಿಧಿ ತೀರ ನಾರಾಯಣನ ಸಾರಿದರು ಕೋಲೆ ॥ ೮ ॥ ಸುರರ ಪ್ರಾರ್ಥನೆ ಕೇಳಿ ಧರೆಯೊಳು ತಾನೇವೆ । ಬರುವೋದಕುಪಾಯ ಮಾಡಿದ ಕೋಲೆ ॥ ಬರುವೋದು ಕುಪಾಯ ಮಾಡಿದ ನಮ್ಮ ಸಿರಿ । ಹರಿಯಾ ಮಹಿಮಿಗೆ ನಮೊ ನಮೊ ಕೋಲೆ ॥ ೯ ॥ ಪ್ರಾಣ ತನಯ ವಿಷ್ವಕ್ ಸೇನಗೆ ಪೇಳಿದ । ಕ್ಷೋಣಿಯೊಳಗಸುರ ಕುಲದಲ್ಲಿ ಕೋಲೆ ॥ ಕ್ಷೋಣಿಯೊಳಗಸುರ ಕುಲದಲ್ಲಿ ಶ್ರೇಷ್ಠನಾದ । ಸ್ವರ್ಣ ಕಶಿಪುವಿನ ಸತಿಯಲ್ಲಿ ಕೋಲೆ ॥ ೧೦ ॥ ಪ್ರಹ್ಲಾದ ನಾಮದಿ ಜನಿಸೆಲೊನೀ ಮುಂದೆ । ಉಲ್ಹಾಸದಿಂದ ಬರುವೆಸು ಕೋಲೆ ॥ ಉಲ್ಹಾಸದಿಂದ ಬರುವೆಸು ನಿನ್ನ ವೈರಿ । ಬಲ್ಲಿದ ಪಿತನ ಕೊಲ್ಲುವೆ ಕೋಲೆ ॥ ೧೧ ॥ ನಿನ್ನ ಗೋಸುಗ ನಾನು ಘನ್ನನರ ಮೃಗರೂಪ ] ವನ್ನೇಧರಸೀ ಬರಧೀನಿ ಕೋಲೆ॥ ವನ್ನೇ ಧರಿಸಿ ಬರಧೀನಿ ಪ್ರಹಲ್ಹಾದ । ಮುನ್ನೇನು ನಿನಗೆ ಭಯವಿಲ್ಲ ಕೋಲೆ ॥ ೧೨ ॥ ನಿನ್ನಲ್ಲಿ ನನ್ನ ಪರಿವಾರ ಸಹಿತದಿ । ಚನ್ನಾಗಿ ಇಪ್ಪೇನನುಗಾಲ ಕೋಲೆ ॥ ಚನ್ನಾಗಿ ಇಪ್ಪೇನನುಗಾಲ ಮುಖ್ಯ ಪ್ರಾಣ । ನಿನ್ನನು ಬಿಟ್ಟರ ಎಂದೆಂದು ಕೋಲೆ ॥ ೧೩ ॥ ಎಲ್ಲ ಮಹಿಮವ ನಿನ್ನಲ್ಲಿ ತೋರಿಪೆ । ಎಲ್ಲರಕಿಂತ ಕರುಣವೇ ಕೋಲೆ ॥ ಎಲ್ಲರಕಿಂತ ಕರುಣವ ಮಾಳ್ಪೆನು । ಇಲ್ಲಿಂದ ಧರಿಗೆ ನಡಿಯೆಂದ ಕೋಲೆ ॥ ೧೪ ॥ ಈ ರೀತಿ ವರಗಳ ಹರಿಯಿಂದ ಪಡಕೊಂಡು ] ಸಾರಿ ಬಂದಾನು ಧರಿಯಲ್ಲಿ ಕೋಲೆ ॥ ಸಾರಿ ಬಂದಾನು ಧರಿಯಲ್ಲಿ ದೈತೇಯ ವೈರಿ ತಾನಾಗಿ ಮೆರೆದಾನು ಕೋಲೆ ॥ ೫ ॥ ಸುರಮುನಿ ಮುಖರಿಂದ ಪರತತ್ವ ಸಾರವ ] ಅರಿತನು ತಾಯಿ ಗರ್ಭದಿ ಕೋಲೆ ॥ ಅರಿತನು ತಾಯಿಗರ್ಭದಿ ತಾನಿದ್ದು ] ಮರೆಯದೆ ಬಾಲರಿಗೆ ಪೇಳಿದ ಕೋಲೆ ॥ ೧೬ ॥ ಗುರುಗಳು ಪೇಳಿದ ನುಡಿಗಳು ಕೇಳದೆ ।

ಪರದೈವ ನಮ್ಮಾ ಹರಿಯೆಂದು ಕೋಲೆ ॥ ಪರದೈವ ನಮ್ಮಾ ಹರಿಯೆಂದು ಪೇಳಲು ] ಗುರುಗಳು ನೃಪಗೆ ತಿಳಿಸಲು ಕೋಲೆ ॥ ೧೭ ॥ ತನ್ನ ತನ ಯನ ವಿನಯಾ ಪೂರ್ವಕ ಕರೆದು ] ಮನ್ನಿಸಿ ತೊಡಿಯ ಮೇಲಿಟ್ಟು ಕೋಲೆ ॥ ಮನ್ನಿಸಿ ತೊಡಿಯಾ ಮೇಲಿಟ್ಟು ಪರಿಪರಿ । ಬಣ್ಣಿಸಿ ಮಗನಾ ಬೆಸೆಗೊಂಡ ಕೋಲೆ ॥ ೧೮ ॥ ಚಿನ್ನಾ ನಿನ್ನ ಗುರು ಏನೇನು ಪೇಳ್ಯಾನ ( ಪೇಳಿಹನು ) ಚೆನ್ನಾಗಿ ಎನಗೆ ತಿಳಿಸಯ್ಯ ಕೋಲೆ ॥ ಚನ್ನಾಗಿ ಎನಗೆ ತಿಳಿಸಯ್ಯ ಪ್ರಹ್ಲಾದ ] ಎನ್ನ ಮನಸಿಗೆ ಬರುವಂತೆ ಕೋಲೆ ॥ ೧೯ ॥ ತಾತನೆ ನಿನ್ನಯ ಪೋತನು ಪೇಳಿವ ] ಮಾತನು ನಿನ್ನ ಮನಸಿಗೆ ಕೋಲೆ ॥ ಮಾತನು ನಿನ್ನ ಮನಸಿಗೆ ಬ್ಯಾರೊಂದು ] ರೀತಿಂದ ನೀನು ತಿಳಿಬ್ಯಾಡ ಕೋಲೆ ॥ ೨೦ ॥ ಓಂನಮೋ ನಾರಾಯಣ ಏತಿ ಸಿದ್ಧಂ । ತನ್ನಾಮ ವೇದಾವಳಿ ಗರ್ಭ ಕೋಲೆ ] ತನ್ನಾಮ ವೇದಾವಳಿ ಗರ್ಭ ವೆನಿಪಮ । ಮನ್ನಾದ ಭಿಷ್ಟೀಯ ಕೊಡುವೊದು ಕೋಲೆ ॥ ೨೧ ॥ ಅರ ಸುವಿರುದ್ಧಾ ಗುಣಗಳಿಗಾಶ್ರಯ ] ಅರ ಗಳಿಗಾಶ್ರಯ ನಾಗನು ಕೋಲೆ ॥ ಅರಗಳಿಗಾಶ್ರ ಯನಾಗನು ಎಂದಿಗು । ನರನ ಸಮ್ಮಂಧೀ ಅದು ನಾರ ಕೋಲೆ ॥ ೨೨ ॥ ನಿರ್ದುಷ್ಟ ವೇದೋದ್ಭವ ಜ್ಞಾನ ನಾರಂ । ನಿರ್ದುಷ್ಟ ವಿಜ್ಞಾನ ವಿಷಯಾನು ಕೋಲೆ ॥ ನಿರ್ದುಷ್ಟ ವಿಜ್ಞಾನ ವಿಷಯಾನು ಸದ್ಗುಣ ] ವರ್ಧಿಷ್ಣ ತಾನಾಗಿ ಇರುವೋನು ಕೋಲೆ ॥ ೨೩ ॥ ಜ್ಞಾನೀ ಜನಗಮ್ಯಜ್ಞಾನಾತ್ಮ 'ಸುಖ ಮಯ ] ಹೀನ ನಾಗನು ಕರ್ಮ ತತಿಯಿಂದ ಕೋಲೆ ॥ ಹೀನನಾಗವು ಕರ್ಮತತಿಯಿಂದ ಸರ್ವಜ್ಞ ] ಏನೂ ಮಾಡಿದರು ಸುಖ ಪೂರ್ಣ ಕೋಲೆ ॥೨೪॥ ಶಿರದಿಂದ ಪೂರ್ಣನು । ಕರದಿಂದ ಪೂರ್ಣನು ಚರಣಾದಿ ಅವಯವ ಪರಿಪೂರ್ಣ ಕೋಲೆ ॥ ಚರಣಾದಿ ಅವಯವ ಪರಿ ಪೂರ್ಣ ಕಾಲ ದೇಶ ] ಪರಮ ಗುಣಗಣ ಪರಿಪೂರ್ಣ ಕೋಲೆ ॥೨೫॥ ಶಿರಿ ಬೊಮ್ಮ ಶಿವ ಮುಖ್ಯ ಸುರಗಣ ಯಾವತ್ತು ] ಅರಿಯಾದು ಶ್ರೀಹರಿ ಗುಣ ಲೇಶ ಕೋಲೆ ॥ ಅರಿ ಯಾದು ಶ್ರೀಹರಿ ಗುಣ ಲೇಶವೆಂದಿಗೂ । ಹರಿಗೀ ಸುರಗಣ ಸರಿಯೇ ನೊ ಕೋಲೆ ॥ ೨೬ ॥ ಜನುಮಾದಿ ಅಷ್ಟಕ ಕಾರಣಶ್ರೀ ವಿಷ್ಣು ] ಜನ ನಾಮಯ ಸ್ಥಿತಿ ಮೃತಿ ದೂರ ಕೋಲೆ ॥ ಜನನಾಮಯ ಸ್ಥಿತಿ ಲಯ ದೂರ

ಜಗಕೆಲ್ಲ । ಜನಕಾನಾಗಿಪ್ಪ ಜಗದೀಶ ಕೋಲೆ ॥ ೨೭ ॥ ಏಕೋ ನಾರಾಯಣಾನೇಕ ಸುರಗಣ ] ಸಾಕುವೋದಾತ ಸುರನಾಥ ಕೋಲೆ । ಸಾಕುವ ದಾತ ಸುರನಾಥ ಜಗದೊಳು । ಖ್ಯಾತ ಮಹಿಮನ ನತಿಸುವೆ ಕೋಲೆ ॥ ೨೮ ॥ ಕರುಣಾ ಸಾಗರ ನಿಜ ಶರಣಾ ಪಾಲಕ ಸ್ವಾಮಿ ] ಶರಣು ಪೊಕ್ಕವರ ಪೊರೆವನು ಕೋಲೆ ಶರಣು ಪೊಕ್ಕವರ ಪೊರೆವನು ಮಹ ಮಹಿಮ । ಚರಣ ಪಂಕಜ ಯುಗ ಭಜಿಸುವೆ ಕೋಲೆ ॥ ೨೯ ॥ ಮಹದಾದಿ ತೃಣಾಂತ ಈ ಮಹ ವಿಶ್ವದೊಳು ಆ । ಮಹ ಮಹಿಮಾನಿರುವೋನು ಕೋಲೆ ॥ ಆ ] ಮಹ ಮಹಿಮಾನಿರುವೋನು ಸರ್ವದ । ಗಹನ ಮಹಿಮನ ನಮಿಸೂವೆ ಕೋಲೆ ॥ ೩೦ ॥ ಮಾಲೋಲ ಹರಿಗುಣ ಜಾಲವ ಪೊಗಳುವ ] ಬಾಲನ ನುಡಿಕೇಳಿ ಖಳನಾಗ ಕೋಲೆ ॥ ಬಾಲನ ನುಡಿಕೇಳಿ ಖಳನಾಗ ಕೋಪದಿ । ಜಾಳೀಸಿ ನುಡಿಯಾ ನುಡಿದನು ಕೋಲೆ ॥ ೩೧ ॥ ನನಗಿಂದ ಉತ್ತಮ ಅವನಾವ ದೇವನು ] ಎನ ಮುಂದೆ ಎನ್ನ ಹಗೆಯನು ಕೋಲೆ ॥ ಎನ ಮುಂದೆ ಎನ್ನ ಹಗೆಯನು ಬಂಣಿಪಿ । ತನಯನೆ ಎನಗೆ ವೈರ್ಯಾದೆ ( ವೈರಿ ಆದಿ ) ಕೋಲೆ ॥ ೩೨ ॥ ಕಂದಾ ದೈತ್ಯರ ಕುಲ ಚಂದನ ವನದೊಳು । ನಿಂದ್ಯಾದ ಕಂಟಕ ತರುವಂತೆ ಕೋಲೆ ॥ ನಿಂದ್ಯಾದ ಕಂಟಕ ತರುವಂತೆ ·ಪುಟ್ಟಿದ್ಯೊ । ಮಂದ ಪ್ರಹ್ಲಾದ ಪೇಳುವೆ ಕೋಲೆ ॥ ೩೩ ॥ ನಾರಾಯಣೆಂಬೋವ ಸುರರಾಧರಾಧಮ ] ಧೀರ ದೈತೇಯರ ಸರಿಯೇನು ಕೋಲೆ । ಧೀರದೈತೇಯರ ಸರಿಯೇನು ಪ್ರಲ್ಹಾದ । ತೋರದೆ ಎಲ್ಲಿ ಸೇರಿದ ಕೋಲೆ ॥೩೪॥ ಬಲವಂತ ನಾದರೆ ಬಯಲೀಗೆ ಬಾರದೆ । ಕಳತನದಿಂದ ತಿರಿಗ್ಯಾನೆ ಕೋಲೆ॥ ಕಳತನದಿಂದ ತಿರುಗುವ ಪ್ರಹ್ಲಾದ ] ಛಲವ್ಯಾಕೋ ದೈತ್ಯರ ಕುಲದೊಳು ಕೋಲೆ ॥೩೫॥ ಹಿಂದಕೆ ನಮ್ಮ ಹಿರಣ್ಯನಯನನ] ಹಂದಿರೂಪದಿಂದ ಕೊಂದನು ಕೋಲೆ ॥ ಹಂದೀರೂಪದಿಂದ ಕೊಂದವನ ಸುದ್ಧಿ ಎನ್ನ। ಮುಂದೆ ಪೇಳದಿರೊ ಪ್ರಲ್ಹಾದ ಕೋಲೆ ॥೩೬॥ ಆ ಕಾಲದಲ್ಲಿ ನಾನಿಲ್ಲದ ಕಾರಣ] ಏಕಾಕಿ ಯಾದವನ ಸವರಿದ ಕೋಲೆ॥ ಏಕಾಕಿ ಯಾದವನ ಸವರೀದ ತ್ವರದಿಂದ। ಲೋಕಾಂತರದಲ್ಲಿ ಸೇರಿದ ಕೋ ॥೩೭॥ ಅಂದೀನ ದಾರಭ್ಯ ವಂದೀನ ಕಾದರು ] ಇಂದೀನ ವರೆಗೂ ಎನ

ಕೋಲೆ ॥ ಇಂದೀನ ವರೆಗೂ ಎನ ಮುಂದೆ ಅವನು । ಬಂದು ತೋರಿದರೆ ಕೊಂದೇನು ಕೋಲೆ ॥ ೩೮ ॥ ನೀಚಾನಗುಣಗಳ ವಾಚೀಸ ಬ್ಯಾಡವೊ । ಯೋಚಿಸು ನಿನ್ನ ಗತಿಯೇನು ಕೋಲೆ ॥ ಯೋಚಿಸು ನಿನ್ನ ಶಿಕ್ಷಿಪೆ ಪ್ರಹ್ಲಾದ । ಮೋಚಾಕ ನವನೇ ಪೇಳೇಲೊ ಕೋಲೆ ॥ ೩೯ ॥ ನಿನಗಾವ ಬಲಉಂಟೊ ನಿನಗಾವ ಸಹಯುಕಾರಿ । ಎನಗಿನ್ನ ಬಲವಂತನಾವನು ಕೋಲೆ ॥ ಎನಗಿನ್ನ ಬಲವಂತನಾವೋನು ಲೋಕದೊಳು । ನಿನಗಿನ್ನು ತಿಳಿಯಾದು ಹಸುಗೂಸು ಕೋಲೆ ॥ ೪೦ ॥ ಈರೀತಿ ನಿನ್ನಮಾತು ಆರಾರು ಒಪ್ಪರು । ಆರೊಂದು ಲೋಕದ ಅಧಿಪತಿ ಕೋಲೆ । ಆರೊಂದು ಲೋಕದ ಅಧಿಪತಿ ಶ್ರೀಹರಿ । ಮೂರು ರಹಿತನಾಗಿ ನಿರ್ದುಷ್ಟ ಕೋಲೆ ॥ ೪೧ ॥ ಸೃಷ್ಟ್ಯಾದಿ ಕಾರಣ ಸರ್ವೇಷ್ಟದಾಯಕ । ಶಿಷ್ಟೇಷ್ಟ ಪ್ರಿಯ ಸುರಗೇಯ ಕೋಲೆ ॥ ಶಿಷ್ಟೇಷ್ಟ ಪ್ರಿಯ ಸುರಗೇಯ ನಮ್ಮ ಪರ । ಮೋಕ್ಷಿಯ ತಾತಾ ಸುಖದಾತ ಕೋಲೆ ॥೪೨॥ ನೀನು ಮೊದಲಾಗಿ ನಾನು ಕಡೆಯಾದ । ಅನೇಕ ಚೇತನ ಜಡದೊಳು ಕೋಲೆ ॥ ಅನೇಕ ಚೇತನ ಜಡದೊಳು ತಾನಿದೆ । ನಾನಾ ರೂಪದಿ ನಿಂತು ಪ್ರೇರಿಪ ಕೋಲೆ ॥ ೪೩ ॥ ಪ್ರೇರಕ ಪ್ರೇರ್ಯನು ವ್ಯಾಪಕ ವ್ಯಾಪ್ತನು ತೋರಿಕೊಳ್ಳದೆ ತಾನಿರುತಿಪ್ಪ ಕೋಲೆ ॥ ತೋರಿಕೊಳ್ಳದೆ ತಾ ನಿರುತಿಪ್ಪ ಶ್ರೀ ಹರಿ । ಗಾರಾರ ಭಯವು ಮೊದಲಿಲ್ಲ ಕೋಲೆ ॥ ೪೪ ॥ ಏಕರೂಪ ದಿಂದನೇಕ ಬ್ರಹ್ಮಾಂಡಗಳ । ಏಕಾಪೋಶನ ಮಾಡಿ ಏಕಾಕಿ ಕೋಲೆ ॥ ಏಕಾಪೋಶನ ಮಾಡಿ ಏಕಾಕಿ ತಾನಾಗಿ । ಏಕ ಮೇವದ್ವಿತಿ ನೆನಸಿದ ಕೋಲೆ ॥ ೪೫ ॥ ದೇಶಕಾಲದಿಂದ ಈಶಗ ಸಮನೆನಿಪ । ಶ್ರೀಶನ ರಾಣಿ ಗುಣ ಮಣಿ ಕೋಲೆ । ಶ್ರೀಶನ ರಾಣಿ ಗುಣಮಣಿ ಮಹಲಕ್ಷ್ಮೀ । ವಾಸುದೇವಗೆ ಸರಿಯಲ್ಲ ಕೋಲೆ ॥೪೬॥ ಆವಾವ ದೇಶದಿ ಆವಾವ ಕಾಲದಿ । ಆವಾವ ರೂಪ ಧರಿಸುವ ಕೋಲೆ ॥ ಆವಾವ ರೂಪ ಧರಿಸಿದ ಹರಿ ಮನೋ। ಭಾವ ತಿಳಿದು ತಾ ಉದಿಸೋಳು ಕೋಲೆ ॥ ೪೭ ॥ ಶ್ರೀ ದೇವಿ ಕಾರುಣ್ಯ ಕುಡಿನೋಟ ಬಲದಿಂದ । ವೇಧಾದಿ ತೃಣಾಂತ ಜಗವೆಲ್ಲ ಕೋಲೆ ॥ ವೇಧಾದಿ ತೃಣಾಂತ ಜಗವೆಲ್ಲಾ ಸೃಷ್ಟ್ಯಾದಿಜಾಲವ । ನೈದೋದು ಸಟೆಯಲ್ಲ ಕೋಲೆ ॥ ೪೮ ॥ ಹರಿಗೆ ಸಮರಾದ ಸುರರಿಲ್ಲ ಜಗದೊಳು । ಸರಿಯಾಗುವೊರೆ ಆರಾರು ಕೋಲೆ ॥ ಸರಿಯಾಗು

ಘೋರ ಅಸುರಾರು ಎಂದಿಗನ್ನ | ಅರಿತು ಮಾತಾಡೋ ಅಸುರೇಶ ಕೋಲೆ || ೪೯ || ಜನನಾ ಮುಯೊಾ ಮರಣ ಮೊದಲಾದ ದೋಷಗಳು | ವನಜ ನಾಭನಿಗೆ ಘಟಿಸಾವು ಕೋಲೇ|| ವನಜ ನಾಭನಿಗೆ ಘಟಿಸಾವು ಅಸುರೇಶ | ಘನವಾದ ಮಹಿಮಿಗೆ ನಮೊ ನಮೊ ಕೋಲೆ || ೫೦ || ಜನರೊಳು ತಾನಿದ್ದು ಜನದಂತೆ ಜನಿಸುವ | ಜನಿತೋಥ ವಿಷ್ಣು ಶ್ರುತಿ ವಾದ್ಯ ಕೋಲೆ || ಜನಿತೋಥ ವಿಷ್ಣು ಶ್ರುತಿ ವಾದ್ಯ ನಮ್ಮ ಹರಿ | ಜನ ಜಾತಿ ಜಡ ವಿಲಕ್ಷಣ ಕೋಲೆ || ೫೧ || ಅನಂತ ಗುಣರೂಪ ಅನಂತ ಅವಯುವ | ಅನಂತ ಶೀರ್ಷಾ ಕರಣಾಕ್ಷಿ ಕೋಲೆ || ಅನಂತ ಶೀರ್ಷಾ ಕರಣಾಕ್ಷಿ ನಾಶಿಕ | ಅನಂತಕಾಯ ಕರವಾದ ಕೋಲೆ || ೫೨ || ಅನಂತ್ಯ ವೇದಾಗಮ ವೇದ್ಯ ಸದ್ಗುಣೊ | ಅನಂತ್ಯ ವಿಜ್ಞಾನ ಸುಖಾತ್ಮ ಕೋಲೆ || ಅನಂತ್ಯ ವಿಜ್ಞಾನ ಸುಖಾತ್ಮ ಶ್ರೀಹರಿ | ಅನಂತ್ಯ ವಿಶ್ವೋದರ ವಿಷ್ಣು ಕೋಲೆ ||೫೩|| ಒಂದು ಗುಣದೊಳಗಾನಂತ ಗುಣಗಳು | ಒಂದು ರೂಪದೊಳ ಗಾನಂತ ಕೋಲೆ| ಒಂದು ರೂಪದೊಳಗಾನಂತರೂಪವುಳ್ಳ| ಇಂದಿರೆ ರಮಣನ ವಂದಿಪೆ ಕೋಲೆ ||೫೪|| ಎಲ್ಲೆಲ್ಲಿ ನೋಡಲಲ್ಲೆಲ್ಲಿ ಇರುತಿಪ್ಪ | ಬಲ್ಲೀವರಿ ಗತಿ ಬಲ್ಲೀದ ಕೋಲೆ || ಬಲ್ಲಿವರಿ ಗತಿ ಬಲ್ಲೀದ ನಮ್ಮ ಸಿರಿ | ನಲ್ಲಾಗಸಮರುಂಟೆ ಧರೆಯೊಳು ಕೋಲೆ ||೫೫|| ಮೇರು ಗಿರಿಯು ಎತ್ತ ನಾರುವೋ ಮೇಲವೆತ್ತ| ನೀರಜ ನಾಭ ನೆತ್ತ ನಿರ್ಭಾಗ್ಯರೆತ್ತ ಕೋಲೆ|| ನೀರಜ ನಾಭ ನೆತ್ತ ನಿರ್ಭಾಗ್ಯದಿತಿಜರು | ದೂರಿದರಾತಗೆ ಕೊರ ತೇನು ಕೋಲೆ || ೫೬ || ಅಜಗಜನ್ಯಾಯದಂತೆ ರಜತಾತವರದಂತೆ | ಗಜಗೂ ಗಜದಂತೆ ಸಮವೇನು ಕೋಲೆ || ಗಜಗೂ ಗಜದಂತ ಸಮವೇನೊ ಅಪ್ಪಯ್ಯ | ಅಜನ ಪಿತಗೆ ನಿನಗೆ ಸಮವೇನು ಕೋಲೆ || ೫೭ || ಕ್ಷೀರಸಾಗರ ವೆತ್ತ ಮೂತ್ರ ಜಲವು ಎತ್ತ | ಮಾರನೈಯ್ಯನು ಎತ್ತ ವಸುರಾರು ಕೋಲೆ || ಮಾರನೈಯ್ಯನು ಎತ್ತ ವಸುರಾರು ಸಮವೇನೊ | ಈರೇಳು ಲೋಕವಧಿನಾಥ ಕೋಲೆ || ೫೮ || ಬಲವ ದ್ವಿರೋಧವು ಕುಲನಾಶ ಮಾಳ್ಪೋದು | ಕುಲನಾಶ ಪಾಪ ಘಟಿಸೋದು ಕೋಲೆ || ಕುಲನಾಶ ಪಾಪ ಘಟಿಸೋದು ದೈತ್ಯೇಶ | ಛಲವ್ಯಾಕೋ ನಮ್ಮಾ ಹರಿಯೋಳು ಕೋಲೆ || ೫೯ ||

ಸ್ವಾಮಿಯ ದ್ರೋಹವು ನಿನಗೇನು ಥರವಲ್ಲ। ಆ ಮಹಾಹರಿಯು ನೆರೆ ನಂಬು ಕೋಲೆ ॥ ಆ ಮಹಾ ಹರಿಯ ನೆರೆನಂಬು ನಿನಗಿಹ। ಆ ಮುಷ್ಕಿ ಕಾರ್ಥ ಸಲಿಸುವ ಕೋಲೆ ॥ ೬೦ ॥ ಶ್ರವಣಾ ಕೀರ್ತನ ವಿಷ್ಣುಸ್ಮರಣಾ ಪಾದಯುಗ। ಸೇವಾರ್ಚನ ದಾಸ್ಯವಂದನ ಕೋಲೆ॥ ಸೇವಾರ್ಚನ ದಾಸ್ಯ ವಂದನ ಸಖ್ಯವಾತ್ಮ। ನೀವೆದನೆಂಬ ನವಭಕುತಿ ಕೋಲೆ ॥ ೬೧ ॥ ನವವಿಧ ಭಕುತಿಯ ನೆವದಿಂದ ಹರಿತನ್ನ। ಭವನಾದೊಳಗಿಟ್ಟು ಪಾಲಿಪ ಕೋಲೆ ॥ ಭವನಾದೊಳಗಿಟ್ಟು ಪಾಲಿಪ ಹರಿಯೊಳು। ನವವಿಧ ದ್ವೇಷಾ ಮಾಳ್ಪೋರೆ ಕೋಲೆ ॥ ೬೨ ॥ ಭಕ್ತಾವತ್ಸಲ ನೆಂಬ ಬಿರುದು ಪೊತ್ತು ಕೊಂಡು। ಭಕ್ತಾಧೀನ ನೆನಿಪ ಭಗವಂತ ಕೋಲೆ ॥ ಭಕ್ತಾಧೀನನೆನಿಪ ಭಗವಂತ ಭಾಗ್ಯಸಿಧಿ। ಭಕ್ತಾರನೆಂವೆಂದು ಬಿಡನ್ಯೈಯ್ಯ ಕೋಲೆ ॥ ೬೩ ॥ ಸರ್ವಾಂತರಾತುಮ ಸರ್ವತ್ರ ವ್ಯಾಪ್ತಾನು। ಸರ್ವರಾಧಾರಾ ಸರ್ವೇಶ ಕೋಲೆ ॥ ಸರ್ವರಾಧಾರಾ ಸರ್ವೇಶ ಸುಖಪೂರ್ಣ। ಸರ್ವೋತ್ತುಮಾ ನಮ್ಮ ಶ್ರೀಹರಿ ಕೋಲೆ ॥ ೬೪ ॥ ಹರಿಯೇ ಸರ್ವೋತ್ತುಮ ಹರಿಯೇ ಪರದೈವ। ಪರಮಾಗುರು ಮುಖ್ಯ ಪ್ರಾಣಾನು ಕೋಲೆ ॥ ಪರಮಾಗುರು ಮುಖ್ಯ ಪ್ರಾಣನ ಪ್ರಸಾದ। ಪರನಾದನವಗೆ ಪರಮೋಕ್ಷ ಕೋಲೆ ॥ ೬೫ ॥ ಎಂಥ ಬಾಲನೊ ಪರಿಪಂಥಿ ಪಕ್ಷಪತಿ। ಇಂಥವನೀ ಎನ್ನ ಮಗನೇನೋ ಕೋಲೆ ॥ ಇಂಥವನೀ ಎನ್ನ ಮಗನೇನೊ ಎನ್ನ ವೈರಿ। ಪಂಥಾ ಮಾಡಿ ನಿನ್ನ ಕೊಲ್ಲುವೇ ಕೋಲೆ ॥ ೬೬ ॥ ಸುರುಳಾ ಬಾಲಕನ ಕೊರಳು ಕತ್ತರಿ ಸೆಂದು। ತರುಳಾನ ದೈತ್ಯರ ಕರದಲ್ಲಿ ಕೋಲೆ ॥ ತರುಳಾನ ದೈತ್ಯರ ಕರ ದಲ್ಲಿ ಕೊಟ್ಟು ತಾನು। ತೆರಳೆಂದು ನುಡಿದಾ ದುರುಳಾನು ಕೋಲೆ ॥ ೬೭ ॥ ಶತ್ರು ಮಿತ್ರೂ ದಾಸೀನಾರು ಆರೈಯ್ಯ। ವೃತ್ರಾಹನನುಜಾ ನವರೊಳು ಕೋಲೆ ॥ ವೃತ್ರಾಹನನುಜಾ ನವರೊಳು ಇರುತಿರೆ। ಶತ್ರು ಎನ್ನೇನು ಮಾಡ್ಯಾನು ಕೋಲೆ ॥ ೬೮ ॥ ಕರಿಗಳು ಎನ್ನ ಮೇಲೆ ತುಳಿದಾಡಲೇನು ಭಯ। ಕರಿರಾಜ ವರದಾ ಎನ ಮಿತ್ರ ಕೋಲೆ ॥ ಕರಿರಾಜ ವರದಾ ಎನ ಮಿತ್ರನಾಗಿರೆ। ಕರಿಗಾಳು ಎನ್ನಾ ಕೊಲ್ಲಾವು ಕೋಲೆ ॥ ೬೯ ॥ ಗಿರಿಯಿಂದ ಧರಿಗೆ ಉರಳೀಸಲವರೆನ್ನ। ಗಿರಿ ಧರೆಯೊಳಗೆ ಹರಿಯುಂಟು ಕೋಲೆ॥

ಗಿರಿ ಧರೆಯೊಳಗೆ ಹರಿಯುಂಟು ಎನ್ನ ಸ್ವಾಮಿ ] ಪೊರೆವೊನು ನಿತ್ಯಾ ಇದು ಸತ್ಯ ಕೋಲೆ ॥ ೨೦ ॥ ಬಾಧ್ಯಾದಿಗತ ತಾನೆ ಬಾಧಕಸ್ಥಿತ ತಾನೆ] ಬಾಧ್ಯ ಬಾಧಕನು ತಾನೇವೆ ಕೋಲೆ ॥ ಬಾಧ್ಯಾ ಬಾಧಕನು ತಾನೇವೆ ಶ್ರೀಹರಿ ] ಬಾಧಕನಾಗವೇ ಪೊರೆವೊನು ಕೋಲೆ ॥ ೨೧ ॥ ಸ್ವತಂತ್ರ ನಾತನು ಸರ್ವದ ಶ್ರೀಹರಿ ] ಅತಂತ್ರ ಜೀವರನುಗಾಲ ಕೋಲೆ ॥ ಅತಂತ್ರ ಜೀವರನುಗಾಲ ಮಾಡಿದ ] ಯುತ ನಾವು ಎಂದಿಗು ನಡಿಯಾದು ಕೋಲೆ ॥ ೨೨ ॥ ಎಲೊ ಬಾಲ ನಿನ್ನಾಹರಿ ಎಲ್ಲಿ ಇರುವೋನು । ಬಲುವರಿ ಅವನ ಪೊಗಳುವಿ ಕೋಲೆ ॥ ಬಲುವರಿ ಅವನ ಪೊಗಳುವಿ ಪ್ರಹಲ್ಲಾದ । ಕುಲಗೇಡಿ ಅವನಾ ತೋರಿಸು ಕೋಲೆ ॥ ೨೩ ॥ ಎನ್ನ ಹಿರಣ್ಯಕ ನಯುನನ ಕೊಂದ ಕಳ್ಳ ] ಎನ್ನ ಕಣ್ಣಿಗೆ ತಾ ತೋರದೆ ಕೋಲೆ ॥ ಎನ್ನ ಕಣ್ಣಿಗೆ ತಾತೋರದೆ ] ಅಡಗಿದ ] ನನ್ನ ತೋರಿದರೆ (ನಿನ್ನ) ಬಿಡುವೆನು ಕೋಲೆ ॥ ೨೪ ॥ ಈ ಪರಿ ಬಾಲನ ಪರಿಪರಿ ಬಾಧಿಸಲು । ಅಪಾರ ಮಹಿಮನ ಸ್ಮರಿಸಲು ಕೋಲೆ ॥ ಅಪಾರ ಮಹಿಮನ ಸ್ಮರಿಸಲು ಬಾಲನ । ಕಾಪಾಡೋಗೋಸುಗ ಬಂದಾನು ಕೋಲೆ ॥ ೨೫ ॥ ನರ ಮೃಗರೂಪ ಧರಿಸಿ ಸಿರಿವತ್ಸ ಕೌಸ್ತುಭ ] ದರ ಚಕ್ರ ಪಮುಪಾಗದ ಧಾರಿ ಕೋಲೆ ॥ ದರ ಚಕ್ರ ಪಮುಪಾಗದಧಾರಿ ತಾನಾಗಿ ] ವರ ವಜ್ರ ಕಂಭದಿ ನಿಲಿಸಿದ ಕೋಲೆ ॥ ೨೬ ॥ ಪರಿ ಪರಿ ವಿಧದಿಂದ ತರುಳಾನ ಬಾಧಿಸಿ ಧರಧರ ಮಾತುಗಳ ನುಡಿಯುತ ಕೋಲೆ ॥ ಧರಧರ ಮಾತುಗಳಾಡುತ ದೈತ್ಯನು । ಭರದಿಂದ ಕಂಭವ ಬಡಿದಾನು ಕೋಲೆ ॥ ೨೭ ॥ ಸರ್ವತ್ರ ವ್ಯಾಪ್ತಿಯ ಪೇಳಿದ ಭಕತನ ] ಸರ್ವವು ಸತ್ಯವಚನವು ಕೋಲೆ॥ ಸರ್ವವು ಸತ್ಯ ವಚನವ ಮಾಡ್ವೊ ಹರಿ । ಸರ್ವ ಜನರಿಗೆ ತೋರಿದ ಕೋಲೆ ॥ ೨೮ ॥ ದೃಢ ವಜ್ರ ಕಂಭವ ಪೊಡೆದು ಬರುವಾಗ । ಜಡಜ ಭವಾಂಡ ಪೊಡವಂತೆ ಕೋಲೆ ॥ ಜಲಜಾಭವಾಂಡ ಪಡದಂತೆ ಶಬ್ದವಾಗಿ ] ಪೊಡದು ಮೂಡಿದ ನರಹರಿ ರೂಪ ಕೋಲೆ ॥ ೨೯ ॥ ಸಿಡಲು ಘರ್ಜಿಸಿದಂತೆ ಪೊಡೆದು ಘರ್ಜಿಸಿವೇಗ ಕುಡಿ ಜಿಂಹೆ ಚಾಚಿ ಕಿಡಿಗಳು ಕೋಲೆ ॥ ಕುಡಿ ಜಿಂಹೆ ಚಾಚಿ ಕಿಡಿಗಳುಗಳುತ । ಕಡು ಕೋಪದಿಂದ ಮೃಡನಂತೆ

ಕೋಲೆ ॥ ೮೦ ॥ ಅಡಿಗಡಿಗೆರಗುತ ಖಡು ಖಡು ಚೀರುತ । ಧಡಧಡ ನಡೆಯುತ ಪುಟಿಯುತ ಕೋಲೆ ॥ ಧಡಧಡ ನಡೆಯುತ ಪುಟಿಯುತ ದೈತ್ಯನ । ತೊಡೆಯ ಮೇಲವನ ಕೆಡಹೀದ ಕೋಲೆ ॥ ೮೧ ॥ ಒಡಲು ಬಗೆದು ಕರಳು ಕೊರಳಲ್ಲಿ ಧರಿಸಿ ರಕುತ । ಕುಡಿವಂತೆ ತೋರಿ ದಿಶಿಗೆ ಚಲ್ಲಿದ ಕೋಲೆ ॥ ಕುಡಿದು ದಶದಿಶಿಗೆ ಚಲ್ಲಲು ಸುರರೆಲ್ಲ । ಗಡಿಬಿಡಿಶ್ಯಾಕಾಶ ಸೇರರ್ದಾರು ಕೋಲೆ ॥ ೮೨ ॥ ಜಯ ಜಯ ಸರ್ವೇಶ ಜಯ ಜಯ ಸ್ವಾತಂತ್ರ । ಜಯಜಯ ಲಕುಮಿರಮಣಾನೆ ಕೋಲೆ ॥ ಜಯ ಜಯ ಲಕುಮಿ ರಮಣನೆ ಜಯವೆಂದು । ಜಯ ಶಬ್ದ ನುಡಿದಾರಮರರು ಕೋಲೆ ॥ ೮೩ ॥ ವಾರಿಜಭವ ಸುರರಾಡಿದ ನುಡಿ ಮನಕ । ತಾರದೆ ಕ್ರೂರದಿ ತೋರುವ ಕೋಲೆ ॥ ತಾರದೆ ಕ್ರೂರದಿ ತೋರುವ ನರಹರಿಯು । ಸಾರಿ ಬಾರದೆ ದೂರ ಸೇರ್ಯಾರು ಕೋಲೆ ॥ ೮೪ ॥ ಸಿರಿದೇವಿ ಬಳಿಗೆ ಸುರರಾಗ ಬಂದು । ಪರಿ ಪರಿಸ್ತುತಿಸಿ ನುಡಿವರು ಕೋಲೆ ॥ ಪರಿಪರಿ ಸ್ತುತಿಸಿ ನುಡಿದಾರು ಹರಿಕೋಪ । ಪರಿಹಾರ ಮಾಡೆಂದು ಎರಗ್ಯಾರು ಕೋಲೇ ॥ ೮೫ ॥ ಸುರರ ಪ್ರಾರ್ಥನೆ ಕೇಳಿ ಸಿರಿದೇವಿ ನುಡಿದಳು । ಹರಿ ಕೋಪ ಎನಗೆ ವಶವಲ್ಲ ಕೋಲೇ ॥ ಹರಿಕೋಪ ಎನಗೆ ವಶವಲ್ಲ ಕೇಳಿರೋ । ತರುಳಾನೆ ಕೋಪ ಕಳಿವೋನು ಕೋಲೆ ॥ ೮೬ ॥ ಈ ರೀತಿ ಸಿರಿದೇವಿ ಸುರರೀಗ ಭಯವಿತ್ತು । ತರುಳಾನ ಯೆತ್ತಿ ನಡದಾಳು ಕೋಲೆ ॥ ತರುಳಾನ ಯೆತ್ತಿನಡದ್ಯೊಯ್ದು ತೋರಿಹರಿಗೆ । ಮರೆಯಾಗಿ ನಿಂತು ಸ್ತುತಿಶ್ಯಾಳು ಕೋಲೆ ॥ ೮೭ ॥ ಪ್ರಹಲ್ಲಾದನಾನನ ನೋಡುತ ಶ್ರೀಹರಿ । ಉಲ್ಹಾಸದಿಂದ ನಗುತಲಿ ಕೋಲೆ ॥ ಉಲ್ಹಾಸದಿಂದ ನಗುತಲಿ ತನ್ನಕರ । ಪಲ್ಲವ ಶಿರದಿ ಇಟ್ಟನು ಕೋಲೆ ॥ ೮೮ ॥ ವರವ ಬೇಡೆನೆ ಮಗು ವರವೇನು ಬೇಕಿಲ್ಲ । ವರ ಕೊಡುವವೆನ್ನ ಪಿತಗೆ ನೀ ಕೋಲೆ ॥ ವರ ಕೊಡೊ ಸ್ವಾಮಿ ಅಲ್ಲ ವರಬೇಡ್ವ ಭೃತ್ಯನಲ್ಲೆನೆ । ವರರಾಜ್ಯ ಮನ್ವಂತರಾಳೆಲೊ ಕೋಲೆ ॥ ೮೯ ॥ ಸುರನಾಥ ಮೊದಲಾದ ಸುರರಾಗ ನಭದಲ್ಲಿ । ನೆರದು ಕುಸುಮ ವೃಷ್ಟಿಗರದಾರು ಕೋಲೆ ॥ ನೆರದು ಕುಸುಮ ವೃಷ್ಟಿಗರದಾರು ಶ್ರೀಹರಿ । ತರುಳ ಪ್ರಹಲ್ಲಾದನ ಶಿರದಲ್ಲಿ ಕೋಲೆ ॥ ೯೦ ॥ ನರಹರಿ ಸತಜನ ಮುರಿತ

ವಿಭಂಜನ । ಧರಿಯಾ ಭಾರವನು ಇಳಿಸಿದ ಕೋಲೆ ॥ ಧರಿಯಾಭಾರವ ನಿಳಿಸೀದ ಸುರನಾಥ ] ಚರಣಾ ಸೇವಕನ ಪೊರದೀಯೊ ಕೋಲೆ ॥ ೯೧ ॥ ಈ ರೀತಿ ಸುರರೆಲ್ಲ ನಾರಲು ನರಹರಿ । ಪೋರ ಪ್ರಹಲ್ಲಾದಗ ನುಡಿದನು ಕೋಲೆ ॥ ಪೋರ ಪ್ರಹಲ್ಲಾದಗೆ ನುಡಿದನು ನರಹರಿ । ಧಾರುಣಿ ಪೊರೆ ಯೆನ್ನ ಕರುಣಾದಿ ಕೋಲೆ ॥ ೯೨ ॥ ಹರಿಯು ವಚನವ ಶಿರದಲ್ಲಿ ತಾ ಧರಿಸಿ ] ಧರಣಿ ಮಂಡಲವ ಪೊರದಾನು ಕೋಲೆ ॥ ಧರಣಿ ಮಂಡಲವ ಪೊರೆಯುತ ಪ್ರಹ್ಲಾದ ] ಹರಿಯಾ ಮಹಿಮವ ಸರುಹೀದ ಕೋಲೆ ॥೯೩॥ ಹರಿಯೇ ಸರ್ವೋತ್ತುಮ ಹರಿಯೇ ಪರದೈವ ] ಹರಿಯೇ ಮಮಕುಲ ಧೊರೆಯೆಂದು ಕೋಲೆ ॥ ಹರಿಯೇ ಮಮಕುಲ ಧೊರೆಯೆಂದು ಜಗ ದೊಳು ] ಬಿರದಿನ ಕಹಳೇ ಓಡಸ್ಯಾನು ಕೋಲೆ ॥ ೯೪ ॥ ಹರಿಯೇ ಸರ್ವೋತ್ತುಮ ಸರನೇ ಜೀವೋತ್ತಮ । ಹರಮುಖ ಸುರರೆಲ್ಲ ಚರರೆಂದು ಕೋಲೆ॥ ಹರಮುಖ ಸುರರೆಲ್ಲ ಚರರೆಂದು ದಿನದಿನ । ಬಿರದಿನ ಭೇರಿ ಹೊಡಸಿದ ಕೋಲೆ ॥ ೯೫ ॥ ಸ್ವತಂತ್ರ ಶ್ರೀಹರಿ ಪರತಂತ್ರ ಜೀವರು । ಇತರೀಗೆ ಸ್ವಾತಂತ್ರ ಲೇಶಿಲ್ಲ ಕೋಲೆ ॥ ಇತರೀಗೆ ಸ್ವಾತಂತ್ರ ಲೇಶಿಲ್ಲ ಜಗ ದೊಳು ] ಪರತತ್ವ ಸಾರ ಪೇಳಿದ ಕೋಲೆ ॥ ೯೬ ॥ ಭೇದ ಮತವುಸತ್ಯಾ ಭೇದ ಮತುವು ಮಿಥ್ಯಾ ] ಸಾಧಿಸಿ ಬೋಧವ ಮಾಡಿದ ಕೋಲೆ॥ ಸಾಧಿಸಿ ಬೋಧವ ಮಾಡಿದ ಪ್ರಹಲ್ಲಾದ । ಗಾಧಾ ಮಹಿಮವ ತೋರಿದ ಕೋಲೆ ॥ ೯೭ ॥ ಹೃದಯಾ ಸದನದಿ ಪದುಮನಾಭನ ಪೂಜಾ। ಸದಕಾಲ ಮಾಡೀ ಸುಖಿಸೀದ ಕೋಲೆ ॥ ಸದ ಕಾಲ ಮಾಡಿ ಸುಖಿಸೀದ ಜಗವನು । ಮದಕ ವಿಲ್ಲದೇ ಸಹಿಸೀದ ಕೋಲೆ ॥ ೯೮ ॥ ಹರಿ ಮೂರ್ತಿ ನೋಡುತ ಹರಿ ನಾಮ ಪಾಡುತ । ಹರಿಪಾದ ಧ್ಯಾನ ಮಾಡುತ ಕೋಲೆ ॥ ಹರಿ ಪಾದ ಧ್ಯಾನಮಾಡುತ ಸಂತತ । ಹರಿಭಕ್ತರಾಗ್ರಣಿ ಯೆನಿಸಿದ ಕೋಲೆ ॥ ೯೯ ॥ ವಿಷ್ಣು ಭಕ್ತರಾದ ವೈಷ್ಣವಾಗ್ರಗಣ್ಯ । ವಿಷ್ಣು ತತ್ವವ ನಿರ್ಣೈಸಿ ಕೋಲೆ । ವಿಷ್ಣು ತತ್ವವ ನಿರ್ಣೈಸಿ ಪ್ರಹ್ಲಾದ । ವಿಷ್ಣು ಸಾಯುಜ್ಯಗಧಿಕಾರಿ ಕೋಲೆ ॥ ೧೦೦ ॥ ಪ್ರಹಲ್ಲಾದ ರಾಯನು ಉಲ್ಹಾಸದಿಂದಲಿ ] ಅಲ್ಹಾದ ಬಡುತಾ (ಹರಿವರ್ಷ) ಪಾತಾಳ ಕೋಲೆ ॥ ಅಲ್ಹಾದ ಬಡುತಾ (ಹರಿವರ್ಷ ಖಂಡದಿ)

ಪಾತಾಳ ಲೋಕದಿ । ಪ್ರಹಲ್ಲಾದನಾಗಿ ಇರುತಿಪ್ಪ ಕೋಲೆ ॥ ೧೦೧ ॥ ಆ ಶೇತು ಹೀಮಾಂತ ಶಾಸನ ಮಾಡುತ । ಲೇಸಾಗಿ ಸಾರ್ವಭೌಮನು ಕೋಲೆ ॥ ಲೇಸಾಗಿ ಸಾರ್ವಭೌಮನು ತಾನಾಗಿ । ಕೀಶೇಶ ಕರುಣಾ ಪಾತ್ರಾನು ಕೋಲೆ ॥ ೧೦೨ ॥ ಧಿಟ್ಟಾ ಪ್ರಹಲ್ಲಾದ ಗಭೀಷ್ಟದಾಯ ಪ್ರಾಣ । ಧಿಷ್ಟಾನನಿಷ್ಟಾ ಸರ್ವೇಷ್ಟ ಕೋಲೆ ॥ ಧಿಷ್ಟಾನ ನಿಷ್ಟಾ ಸರ್ವೇಷ್ಟದಾಯಕ । ಧಿಟ್ಟಾ ಗುರು ಜಗನ್ನಾಥ ವಿಠ್ಠಲ ಕೋಲೆ ॥ ೧೦೩ ॥ ಇತಿ ಪ್ರಥಮ ಸಂಧಿ ಸಮಾಪ್ತ.

(೫) ಸಂಧಿ ಇದೆ ಎಂದು ಹೇಳುತ್ತಾರೆ. ಮುಂದೆ ನಾಲ್ಕುಸಂಧಿ ಇನ್ನು ದೊರೆತಿಲ್ಲ.

## ತಂದೆ ಸುಧೀಂದ್ರ

### ೧೨೪ ಪದ—ರಾಗ—ಕಾಂಬೋದಿ—ತಾಳ ಝಂಪೆ

ಕೇಳಿ ಗುರುರಾಯರ ಯೋಗ ಸಾಮರ್ಥ್ಯಯನು ಮುನಿ । ಮೌಳಿ ರಾಘವೇಂದ್ರರ ಮಹಿಮೆ ರಾಜ್ಯದೊಳರಿದು ॥ ಪಲ್ಲ ॥ ಕುಂಭಕೋಣಿ ಎತ್ತ ಕುಸುಮೂರ್ತಿ ಸ್ಥಳವೆತ್ತ । ಡಂಬ ಕೃಷ್ಣಪೈಪಾಯನರು ಬಿಟ್ಟವೆತ್ತ। ಸಂಭ್ರಮದಿ ದೃಷ್ಟಾಂತ ನೋಡಿ ಪ್ರದಕ್ಷಣೆ ಮಾಡಿ । ಕುಂಭಿಣಿಲಿನಾ ಷ್ಟಾಂಗ ಕುಶಲವಾಗಿಟ್ಟದ್ದು ॥ ೧ ॥ ರತ್ನ ತೆತ್ತಿಸಿದ ರಥವನೆ ಏರಿ ಭೋರಿಡುತ । ನುತ್ತ ಗಂಧರ್ವ ಗಾಯನ ರಭಸದಿ ॥ ಮರ್ತ್ಯರೊಳು ಮಹಾತ್ಮರಿವರೆಂಬೊ ಮಹಿಮೆಯನು । ಪ್ರತ್ಯಕ್ಷ ತೋರಿದರು । ಪರಮ ಯೋಗಿಗಳು ॥ ೨ ॥ ತಿಥಿವಾರ ನಕ್ಷತ್ರ ಮಾಸ ಸಂವತ್ಸರವು । ಅತಿ ವೇಗದಲ್ಲಿ ರಾಯಸದಿ ರಚಿಸೀ ॥ ಪ್ರತಿ ಪುಶಿ ಧಿಟವೆಂಬ ಪಾಮರ ಜನರಿಗೋಸ್ಕರ ಮತಿವಂತರಾ ಕಳುಹಿ ವಾರ್ತೆತರಿಸಿದರು ॥ ೩ ॥ ಭಾರ್ತ (ಭಾರತ) ರಾಮಾಯಣ ಭಾಗವತ ಕಥೆಗಳನು । ಸಾರ್ಥಕದಿ ಪೇಳ್ವರೆಂಬರು ಸುಖ

ತೀರ್ಥರು । ಭಾರ್ತೀಶ ಮತದಲ್ಲಿ ಭಳಿರೆ ರಾಘವೇಂದ್ರರು । ಕೀರ್ತಿ ನಾಭ್ಯಸ್ಥ ತೋರಿದ್ದು ಕಿಂಕರರ ಸಭಿಗೆಲ್ಲ ॥ ೪ ॥ ನಿಂದಿಸಿದವರು ಅಂಧಕ ರಾಗಿ ಹೋಹರು । ಕುಂದು ನುಡಿವವರ ಕುಲಕ್ಷಯ ವಾಹದು ॥ ತಂದೆ ಸುಧೀಂದ್ರರ ಕಂದನ ರಾಘವೇಂದ್ರರ ] ವಂದಿಸಿದವರಿಗಾನಂದ ಮುಕ್ತಿಯಾ ಹದು ॥ ೫ ॥

## ಇಂದಿರೇಶ

### ೧೨೫ ಪದ—ರಾಗ—ದ್ವಿಜಾವಂತಿ—ತಾಳ ಆದಿ

ರಾಘವೇಂದ್ರ ರಾಯರೆಂಬೋ ಮಹಾಯೋಗಿ ವರರ ನೋಡ್ಯೆ ॥ ಪಲ್ಲ ॥ ಭಾಗವತರು ಶಿರಬಾಗಿ ಕರೆಯುಲತಿ ವೇಗದಿ ರಥದೊಳು ] ಸಾಗಿ ಬರುವ ಶ್ರೀ ॥ ಅನು ಪಲ್ಲ ॥ ಮಿನುಗುವ ಘನ ವಾಹನಗಳ ರಥ ಶೃಂಗಾರವೊ । ಕಂದೋಳ್ । ಕನಕ ಛಡಿ ಕೊಡಿಗಳನುಪಮ ಭಾರವೊ । ಅನಿಳನಿಗಮದಿ ನಿಪುಣ ಸುಜನರ ಪರಿವಾರವೊ । ಪರಸ್ಪರ । ಪಣವ ವೇದ ಘೋಷಣ ಸುಸ್ವರ ಗಂಭೀರವೋ ॥ ಘನ ಗುಣಗಣಮಣಿ ಮುನಿರಾಯನ ಮನ । ಪಣಿಯ ಪಾಡಿ ಕುಣಿ ಕುಣಿದಾಡಿ ಶಿರವ । ಮಣಿಸುವರೊ ] ಗುಣ ಪಣಿಸುವರೊ ಪ ] ಕ್ಷಣದಿಂ ತೆರಳಿ ] ವರುಣನ ಬೀದಿಯೋಳು ॥ ೧ ॥ ಧರಣಿ ಸುರವರ ನಿಕರ ಕುಮುದೋದಯ ಚಂದ್ರನ । ಪದ ದು ] ರ್ಧರ ದ್ವಿರದನ ತೆರದಿ ಮೆರೆದ ಅಪ್ರತಿಮ ಮುನೀಂದ್ರನ ॥ ಸರಸ ಸುಧಾ ಪರಿ ಮಳ ಬೆರೆದ ಸುಗುಣ ಸಾಂದ್ರನ । ಧರಿಯೊಳು ಸಿರಿ ವಿಜಯೀಂದ್ರರ ಕುವರ ನೆನಿಪ ಸುಧೀಂದ್ರನ ] ಸರಸಿಜ ಸಂಭವ ಶರಣ್ಯ ಸುಂದರ ನಿಜಾಂಘ್ರಿ ಭಜಕರ ಭಾಗ್ಯೋದಯ । ಸುರ ಸುರಭಿಗೆ ಸಮರೆಂದು ಸಾರಿ ಡಂಗುರ ಹೊಯಿಸುತ ಉತ್ತರ । ಬೀದಿಯೊಳು ॥ ೨ ॥ ಹಲವು ಬಗೆಯ ವೆಗ್ಗಳ ವಾದ್ಯಗಳ ಸುವಾದ್ಯವೋ । ಆರುತಿಯ । ಬೆಳಗುವರು ಹಗಲ ದೀಪಗಳಗಾಧವೊ । ಇಳಿಯೊಳು ಜನುಮ ಸಫಲವೆಂಬುವರ ] ವಿನೋದವೊ ] ಹಾಸ್ಯದ ಲಲನೆಯರಡಿ ಘಿಲಘಿಲಕೆಂಬುವ ನಟನ ಭೇದವೋ ॥

ಭಳಿರೆ ಭಳಿರೆ ಭಜಿಸುವರ ಭಕುತಿ ಬಲಿ ಗೊಲಿದ ಇಂದಿರೇಶನ ಕರವರಗಿಳಿಯೊ ನಳಿಯೊ । ನಳಿನಾಂಘ್ರಿ ಯುಗದಿ । ನಲಿಯುತ ಸುರರಾಜನ ಬೀದಿಯೊಳು ॥ ೩ ॥

### ೧೨೬ ಪದ—ರಾಗ—ಸಾವೇರಿ—ತಾಳ ತ್ರಿವಿಡಿ

ಬಂದನೊ ಸುಜನರ ಸಂದಣಿಯೊಳಗತಿ । ಸುಂದರ ರಥವೇರಿ ಗುರುವರ ಬಂದನೊ ॥ ಪಲ್ಲ ॥ ಬಂದಿ ಜನರು ಮುದದಿಂದ ಬಹು ಪರಾಕೆಂದು ನುಡಿಯಲಾನಂದ ಬೀರುತ ಬಂದನೊ ॥ ಅನು ಪಲ್ಲ ॥ ಕ್ಷಿತಿ [ಶೂ] ಸುರರತಿ ಶ ಭವುತಿ ಬಲ್ಮತಸವರೊ । ಯತಿವರ ರತಿಶಯ ದಶಮತಿ ತತಿದತಿ । ಸಂಸ್ಕೃತ ಭಾಷಣದವರೊ । ಭಯಹರಣನೆಂಬೊ ವಾರುತಿಯ । ಕೀರುತಿಯ । ಪೂರುತಿಯ । ಕೇಳುತ ಮಹಿಮಾಂಗಣ ಕಥಿಸುತ । ಗ್ರಧಿಸುತ । ತುತಿಸುತ । ನುತಿಸಿ ಯತಿ ಶಿರೋಮಣಿಗೆ ರತುನ ಖಚಿತವಾದಾರುತಿಯ ಬೆಳಗುತಿರೆ ॥ ೧ ॥ ಶರಣರ ಸುರತರು ವರದ ಶಿಖಾಮಣಿಯೊ । ಮುರಹರ ಚರಣಾಂಬುಜ ವರ ಮಧುಕರ ಸಿರಿ । ಪರಮ ಹಂಸರ ಧಣಿಯೋ । ಕೋವಿದ ಬುಧರೊಳು ಮದಕರಿಯೋ । ಶುಭ ಧೊರೆಯೊ। ವಾಗ್ಧುರಿಯೊ ॥ ಸರಸಾರ್ತಿ ಜನಗಳ ನೆರೆಸುತಾದರಿಸುತಾ । ಬಲು ಸುಖ ಸುರಿಸುತಾ । ಚರಿಸುತಾ ದರಿದ್ರವ ತರಿದು । ಪೊರೆದೂ । ಕರೆದವರಿಗೆ ಕೈಶರೆಯಾಗುವೆನೆಂಥರುಷದಿ ಗುರುವರ ಬಂದನೊ ॥ ೨ ॥ ಬಗೆ ಬಗೆ ಮಣಿಗಳು ಬಿಗಿದ ಬಿಳಿಗೋಡಿಗಳೋ ವಾ । ಲಗ ಘೂರ್ಮಿಡೆ ಭಟರುಗಳ । ಹೆಗಲ ವ್ಯಾಲೆ ಝುಗಿ ಝುಗಿಸುವ ಛಡಿಗಳೊ । ಕುಣಿಕುಣಿದಾಡುವ ವರಹಿವೇಣಿಗಳೋ । ವಾಣಿಗಳು । ಶ್ರೇಣಿಗಳು । ಶೋಭಿಸೆ ಸುಜನರು ಕೈಮುಗಿವರು । ನಗುವರು । ಸಂಭ್ರಮದಿಂದ ಬಗಿವರು । ವ್ಯಗಾರೋಢನದಿ । ಚಿಗಿದು । ಅಘದೂರೊಗೆದ ಜನರೊಳು । ವೆಗ್ಗಳದಲಿಂದಿರೇಶನ ಭಕುತಾಗ್ರಣಿ ಬಂದನೊ ॥ ೩ ॥

## ಗುರು ಇಂದಿರೇಶ

### ೧೨೭ ಪದ—ರಾಗ—ಮೋಹನ—ಅಟ್ಟತಾಳ

ಸುಂದರ ಗುರು ರಾಘವೇಂದ್ರರೆಂತೆಂಬೊ ಕ। ರ್ಮಂದಿಗಳರ] ಸೆ ವಂದಿಸುವೇ ॥ ಪಲ್ಲ॥ ಬಂದ ಭಕುತರಘ ವೃಂದ ಕಳೆವ ಗುಣ। ಸಾಂದ್ರ ಸನ್ನುತ ಮಹಿಮಾ] ರೆಂದು ನಾ ನಂಬಿದೆ ॥ ಅ. ಪ. ॥ ಪರಮ ಕರುಣಿ ನಿಜ ಚರಣ ಭಜಕರನು] ದ್ಧರಿಸುತನುದಿನ ಪೊರವೆನೆಂದು। ಕರವೆ ಮುಗಿದು ತ್ವರ ಪರಿ ಪರಿಯಲಿ ನಿನ್ನಾಲ್ಪರಿಯುವೆ ದೈನ್ಯದಿ ಬಾಯ್ತೆರೆಯುವೆ ಕರಪಿಡಿ ಎಂದು ಕರೆಯುವೆ] ನಿನ್ನ] ಸರಿ ಪೊರೆವೆಂಥ ಧೊರೆಗಳ ಕಾಣೆ ಮದ್ಗುರುವೇ। ಎನ್ನಂಥ ಪಾಮರ। ನರರ ಕಾವುದು ನಿನಗೆ ಅಚ್ಚರವೇ ವರಯೋಗಿ ವರ್ಯನೇ ॥ ನಿರುತ ವೃಂದಾವನದಿ ರಾಜಿಸಿ ಮೆರೆವ ಮಂಗಳ ಚರಿತ ತವ ಪದ] ಸ್ಮರಣೆ ಸಂತತ ನೀಡು ಮರಿಯದೆ। ಹರುಷದಲಿ ನಿರ್ಜರರ ತರುವೇ ॥ ೧ ॥ ಘೋರ ದುರಿತ ವೆಂಬೋ ವಾರಿಧಿಯೊಳ ಗೀನ। ಲಾರೆನಿನಿತು ದಯ ಬಾರದೇನೋ ಪೋರನೆನುತಲಿ ತಾ ತ್ವರ ಮಾಡವೆ ಧಡ ಸೇರಿಸೊ] ಬಿನ್ನಪ ವಿಚಾರಿಸೋ। ಮನ್ನಿಸಿ ಮಾರ್ಗ ತೋರಿಸೋ॥ ವಿದಾರಿರುವ ಕಡು ಕಾಮಾದಿಖಳರ। ಬೇರುಗಳನಳಿಸೊ। ನಿನ್ನೊಳು ನಿರಂ ತರ ಸೂರಿ ಜಿಕತರ ದಾರಿಯೊಳು ನಿಲಿಸೊ। ಉರು ಪಾಪ ಸಂಚಯ ಕ್ರೂರ ಕುಜನ ಕುಠಾರ ಹಿಂಮಳಿಸೊ॥ ಮನ್ಮನದ ಭಿಷ್ಟೇಯ ಭೂರಿ ನಮಿ ಸ.ವೆ ಚಾರು ಕಿಟಜಾ। ತೀರ ನಿಲಯನೆ ಸಾರಿದವರನು ಪಾರುಗಾಣಿಪ ನೆಂದು ಡಂಗುರ ಸಾರುತಿದೆ ಯತಿ ವೀರ ಸಲಿಸೊ ॥ ೨ ॥ ಏನೇಸು ಜನುಮದಿ ಕ್ಲೇಶಗಳನುಭವಿಸಿ। ಘಾಸಿ ಗೊಳಿಸಿ ಮನ ಬೇಸರದೆ] ಹೇಸಿ ವಿಷಯಂಗಳ ಲೇಸು ತಿಳಿಯದೆ ಮೊರೆ ಮೋಸದಿ। ದುಷ್ಟರ ಸಹ ವಾಸದೀ] ಚರಿಸಿದೆ ಮಂದಹಾಸದಿ ॥ ಸಂತೈಸು ರವಿ ಸಂಕಾಶ ಜನ ವಿದ್ವಾಂಸ ಸಾದರದೀ। ಕಾಷಾಯವಸನ ವಿಭೂಷಿತಾಂಗನೆ ವ್ಯಾಸ ಮುನಿ ಭರದೀ] ಗಜರಾಮ ಪುರದಾ ಧೀಶಮುಖರಿಗೆ ತೋಷ ನೀಬೆರದಿ। ಈ ಸಮಯ ಸುತಿಸುವೆ ॥ ಆ ಸಮೀರ ಮತಾಬ್ಧಿ ಚಂದಿರ ॥ ಶ್ರೀಶ ಗುರು

ಇಂದಿರೇಶ ಸಂಶ್ರಿಯ । ದಾಸ ಭವ ಭಯ ರಾಶಿ ತರಿದು। ಉದಾಸಿಸದೆ ನೀ ಪೋಷಿಸೆನ್ನನು ॥ ೩ ॥

ಭೀಮೇಶ ವಿಠಲ

**೧೨೮ ಪದ—ರಾಗ—ಆನಂದ ಭೈರವಿ—ತಾಳ ಆದಿ.**

ಬೇಡುವೆ ನಿನ್ನ ಕೊಡುವಾವರ ವನ್ನಾ ॥ ಪಲ್ಲ ॥ ಬೇಡುವೆ ಭಕುತರ ಬೀಡೋಳು ನಿನ್ನ । ಕೊಂ ] ಡಾಡುವರಘದೊಳಗಾಡುವ ವಿಭುವೆ ನಾ ॥ ೧ ॥ ಇಂದ್ರನ ವಿಭವ ಸುಧೀಂದ್ರ ತನುಜ ರಾಘ ] ವೇಂದ್ರ ಗುರುವೆ ಕಮಲೇಂದ್ರನ ಕೃಪೆಯೆನಾ ॥ ೨ ॥ ವರ ಭೀಮೇಶ ವಿಠಲ ನರಿದವ ರೊಳು ನಾ ] ವರ ನೆನುತಲಿ ನಿನ್ನ ಚರಣವಸ್ತುತಿಸಿ ॥ ೩ ॥

**೧೨೯ ಪದ—ರಾಗ—ಬ್ಯಾಗಡ—ತಾಳ ಏಕ**

ಬಂದೆ ಗುರುರಾಯ ನಿನ್ನ ಸಂದರುಶನವ ಬಯಸಿ ॥ ಪ ॥ ಬಂ ದೆನೊ ಭವದೊಳು ನೊಂದು ನಿನ್ನ ಪಾದಾರವಿಂದವ ನೋಡ್ಯಾನಂದ ಪಡೆ ಯಲಿ ದಿನದಿನ ॥ ಅ. ಪ. ॥ ಪರಿಪರಿಯಿಂದಲ್ಲಿ ಪರ.ಮನುಜರನನು ಸರಿಸಿದ ದೋಷ ಹರಿಪ। ದೆಂದು ಬೇಡಿ ನಮಿಸುತಲಿ ॥ ೧ ॥ ಸತತ ಸತಿ ಸುತರ ತತಿಗೆ ಪೋಷಿಸದೆ। ಕೃತಿ ಪತಿಯ ಸ್ಮರಿಪ ] ಮತಿಯ ಬೇಡಿ ನಮಿಸುತಲಿ ॥ ೨ ॥ ಕರುಣಿ ಭೀಮೇಶ ವಿಠಲನೆ ನಿಮ್ಮ ನುಡಿ ತ್ರುಟಿ ಯಾರದ ತಾ ಘಟನೆ ಮಾಡುವದರಿತು ] ಬಂದೆ ಗುರುರಾಯ ನಿನ್ನ ॥ ೩ ॥

ವಿಜಯ ಮೋಹನ್ನ ವಿಠಲ

**೧೩೦ ಪದ—ರಾಗ—ಕಾಂಬೋದಿ—ತಾಳ ಝಂಪಿ**

ಕಂಡು ಧನ್ಯ ನಾದೆ ಗುರುಗಳ। ಕಣ್ಣಾರೆನಾ ॥ಪಲ್ಲ॥ . ಕಂಡು ಧನ್ಯ ನಾದೆ ನಮ್ಮ ಈ ಗುರುಗಳ ॥ಅ. ಪ.॥ ತುಂಗಾ ತಟದಿ ಬಂದು ] ನಿಂತ ಪಂಗು ಬಧಿರಾದ್ಯಂಗ ಹೀನರ। ಅಂಗಗೈಸಿ ನಲಹುವಾಸರ। ಸಿಂಗ ನಂಶ್ರಿ ಭಜಕರಿವರ ॥ ೧ ॥ ಗುರುವರ ಸುಗುಣೇಂದ್ರರಿಂದ ಪರಿಪರಿ ಯಲಿ ಸೇವೆ ಗೊಳುತ ] ವರ ಮಂತ್ರಾಲಯ ಪುರದಿ ಮೆರವ ಪರಿಮಳಾಖ್ಯ

ಗ್ರಂಥಕರ್ತರ ॥ ೨ ॥ ಸೋಹಂ ಎನ್ನದೆ ಹರಿಯು ] ದಾಸೋಹಂ ಎನಲು ಒಲಿದು ವಿಜಯು । ಮೋಹನ್ನ ವಿಠಲನ್ನ ಪರಮ । ಸ್ನೇಹದಿಂದ ತೋರು ವವರ ॥ ೩ ॥

*** ತಂದೆ ಪುರಂದರ ವಿಠಲ ಕೃತ**

**೧೩೧ ಪದ—ರಾಗ—ಆನಂದ ಭೈರವಿ—ಅಟ್ಟತಾಳ**

ರಾಘವೇಂದ್ರ ಗುರುವೆ ರಾಗದ್ವೇಷಾದಿಗಳು ನೀಗುವಂತೆ ಮಾಡೊ ಭಾಗವತರ ಪ್ರಿಯ ॥ ಪ ॥ ನೆಲೆಯಾಗಿ ಇರುತಿಪ್ಪಿ ವರ ಮಂತ್ರಾಲಯು ದಲಿ । ಸಲಿಮ ಕರೆಯಲು ನಿನ್ನ ಒಲಿದು ನೀ ನಡೆತರುವಿ ॥ ೧ ॥ ನಿನ್ನ ನಾ ನರಿಯೆನೊ ಮನ್ನಿಸಿ ಬಂದ ಬಗೆಗೆ ] ಉನ್ನಂತ ಕಾರಣಾ ಭಿನ್ನವಿಲ್ಲದ ಕರುಣ ॥ ೨ ॥ ತಪ್ಪುಗಳ ಎನ್ನ ವಿಪರೀತಗಳ ಮರೆತು । ಅಪಾರ ಕೃಪೆಯು ಗೊಂಡ ಸರ್ಪ ಶಯನನ ದಾಸ ॥ ೩ ॥ ದಾಸನು ನಾನೆಂದು ಏನು ಮರ್ಮವ ತೋರಿ ] ಶ್ರೀಶನ ಪಾದದಲಿ ಲೇಸು ಭಕುತಿ ಕೊಟ್ಟು ॥ ೪ ॥ ಇಷ್ಟ ದಾಯಕ ಎನ್ನ ಇಷ್ಟವ ತಾಳಿ ನೀ । ಮುಷ್ಟಿಯ ಮುರಿದ ಎನ್ನಿಷ್ಟ ದೈವವತೋರೊ ॥ ೫ ॥ ಎಂದಿಗು ಕುಂದದ ತುಂಗಾ ತೀರದ ಲಿರ್ಪ ॥ ಬಂದ ಭಕುತರಿಗೆ ಹಿಂಗದೆ ವರವೀವ ॥ ೬ ॥ ಯತಿ ಯೊಳಗೆ ಶ್ರೇಷ್ಠನೇ ಯದುಪತಿ ಪ್ರಿಯನೆ ॥ ಸ್ಮೃತಿಗಳು ಆಗೋ ಹಾಗೆ ಮಾಡಿದ ಧೀರನೆ ॥ ೭ ॥ ಪೊಡವಿಯಲಿ ತುಂಬಿತೊ ನಿನ್ನ ಪೆಸರು ಕೇಳೊ ] ಎಡ ಬಿಡದೆ ಎನ್ನಲಿ ನಲಿಯುತಲಿರಬೇಕೊ ॥ ೮ ॥ ಪರಮ ಪುರುಷ ತಂದೆ ಪುರಂದರ ವಿಠಲನ ॥ ನಿರತ ಪೂಜಿಪ ನಿನ್ನ ಅಡಿಗೆ ನಮಿಸುವೆ ॥ ೯ ॥

---

* ಇವರು, ಕೋಯಮತ್ತೂರಿನಲ್ಲಿ ವಶಿಷ್ಟ ಗೋತ್ರ ಯದುಪತ್ಯಾಚಾರ್ಯರಲ್ಲಿ ೨೫—೪—೧೮೭೧ ಇಸವಿಯಲ್ಲಿ ಉದಿಸಿ, ವಯಸ್ಸಿಗೆ ಬಂದ ನಂತರ ಶ್ರೀ ಪುರಂದರ ದಾಸರೆ, ಸ್ವಪ್ನದಲ್ಲಿ ಉಪದೇಶಿಸಿ " ತಂದೆ ಪುರಂದರ ವಿಠ್ಠಲ, ಅಂಕಿತ ಪ್ರದಾನ ಮಾಡಿ ಅನುಗ್ರಹಿಸಿರಲು: ಶ್ರೀ ಕೃಷ್ಣನು ಬಾಲರೂಪದಿಂದ ಇವರ ಮುಂದೆ ಕುಣಿಯುವ ಅನೇಕ ಪದ ಗಳನ್ನು ರಚಿಸಿದ್ದಾರೆ. ಅಪರೋಕ್ಷ ಜ್ಞಾನಿಗಳೆಂದು ತಿಳಿಯುತ್ತದೆ. ಇವರ ಪದಗಳು ಅಚ್ಚಾಗಿವೆ.

### ೧೩೨ ಪದ—ರಾಗ—ಶಂಕರಾಭರಣ—ಛಾಪು ತಾಳ.

ನಮಿಸುವೆ ಗುರುವೆ ನಿನಗೆ ನಮಿಸುವೆ। ನಮಿಸುವೆ ಗುರು ರಾಘವೇಂದ್ರ ಎನ್ನ ಕ್ಷಮಿಸಬೇಕಯ್ಯ ನೀನೀಗ ॥ ಪಲ್ಲ ॥ ಆಹ ಮಮತೆ ಹಿಂಗದು ಸಮಚಿತ್ತ ಬರದು। ವಿಮಲಜ್ಞಾನ ಹೇ ಕರುಣಿಸಬೇಕಯ್ಯ ॥ ಅನು ಪಲ್ಲ ॥ ತುಂಗಾ ತೀರದಲಿ ವಾಸಾ। ಬಹು। ಮಂಗಳವೈಯ್ಯ ಪ್ರದೇಶ ॥ ನಮ್ಮ ರಂಗನ ದಾಸ ವಿಶೇಷ। ನಿನ್ನ ನಂಗಡ ಮಾಡೋರು ವಾಸ। ಅಹ। ಕೆಂಗೆಟ್ಟು ನಿನ್ನಲಿ ಬರುವ ಭಕುತರಿಗೆ। ತುಂಗ ಸಂಕಟ ಕಳೆದು ಮಂಗಳ ನೀಡುವ ॥ ೧ ॥ ಕರೆದಾಗಲೆ ನೀನು ಬರುವಿ। ಬಿರುದು ಕರುಣಸೆಂದು ಧರಿಸಿರುವಿ। ನಿನ್ನ। ಚರಣಶರಣರನು ಪೊರವಿ। ಬಂದು। ಧರೆಯೊಳು ಅಲ್ಲೆಲ್ಲಿ ಇರುವಿ। ಅಹ। ವರ ಜಟೆಗಳ ಪೊತ್ತು ಬದರಿಯ ಮನೆ ಮಾಡಿ। ನಿರತವು ಶೋಭಿಪ ಗರುಡವಾಹನ ದಾಸ ॥ ೨ ॥ ಮಧ್ವ ಮತವೆಂಬ ಅಬ್ಧಿ। ಯಲ್ಲಿ। ಉದ್ಭವಿಸಿದ ದಿವ್ಯ ಜ್ಯೋತಿ। ಶುದ್ಧ। ಸತ್ವ ಗುಣಗಳೆ ರಾಶಿ। ವರ। ತತ್ವ ವಿಷಯ ಉಪದೇಶಿ। ಅಹ। ಅದ್ಭುತ ಚರಿತನೆ ಅಪಾರ ಮಹಿಮನೆ। ವಿಶ್ವನಾಮಕ ತಂದೆ ಪುರಂದರ ವಿಠಲನ ದಾಸಾ ॥ ೩ ॥

### ೧೩೩ ಪದ—ರಾಗ—ಕಾಂಬೋದಿ—ತಾಳಝುಂಪಿ

ಏನು ಬೇಡಲಿ ನಿನ್ನ ಬಳಿಗೆ ನಾ ಬಂದು। ಮಾನದಿಂ ಸಲಹಯ್ಯ ಗುರು ರಾಘವೇಂದ್ರ ॥ ಪಲ್ಲ ॥ ಮನ ಹೊಲೆಗಲಿಸಿತು ಮನವು ವ್ಯೈಲಿಗೆಯಾಯ್ತು। ನೆನೆಯ ಬಾರದದು ಎಲ್ಲ ಬಯಸುವದು ಕೇಳೊ ॥ ಅನುಭವಿಸಲಾರೆನೊ ಅವರ ಕಾಟಗಳನ್ನು। ಎನ್ನ ಉಬ್ಬಸವನು ಯಾರಲಿ ಪೇಳುವೆನೊ ॥ ೧ ॥ ಮನ ವೆಂಬ ಹೊಲೆ ಬಟ್ಟೆ ನೀರಲಿ ನೆನೆಯದು। ಉರಿವ ಬೆಂಕಿಯಲ್ಲಿ ಉರಿಯ ಲೊಲ್ಲದು। ಪರಿಪರಿ ಬಗೆಯಲಿ ಕುಣಿಸುವದು ಎನ್ನನು। ಪರಮ ಪುರುಷಾ ನಿನ್ನ ಮೊರೆ ಹೊಕ್ಕೆನಾನೀಗ ॥ ೨ ॥ ಒಂದು ಕ್ಷಣವಾದರೂ ಹರಿಯ ನೆನವೇನೆನಲು ಒಂದಲ್ಲ ಎರಡಲ್ಲ ಹಲವು ತಾಪತ್ರಯವು ॥ ತಂದೆ ಪುರಂದರವಿಠಲಗತಿ ಪ್ರೀತಿವಂತನೆ। ಒಂದು ಪಾಯವಾದರೂ ಪೇಳಬಾರದೆ ಎನಗೆ ॥ ೩ ॥

## ೧೨೪ ಪದ—ರಾಗ—ಸಾವೇರಿ—ಆದಿ ತಾಳ

ಗುರು ರಾಘವೇಂದ್ರ ನಿನಗೆ ಧರಣಿ ಮಂಡಲ ದೊಳಗೆ | ಸರಿಗಾಣೆ ಸರಿಗಾಣೆನೊ || ಪಲ್ಲ || ಕರೆಯಲು ಒಮ್ಮೆ ನಿನ್ನ ತಡೆ ಮಾಡದೆ ಬಂದಿ| ಕರುಣದಿ ನಿನ್ನ ದಿವ್ಯ ಮೂರುತಿ ತೋರಿದಿ || ಅನು ಪಲ್ಲ || ತುಂಗವಾದ ತುಂಗಾ ತೀರದಿ ಶೋಭಿಪ | ಮಂಗಳ ಪ್ರದನೆ ಮಂಗಳ ಆಕಾರ | ರಂಗನ ಪ್ರಿಯನೆ ಅಂತ | ರಂಗದಿ ಬಂದು ನೀ | ಗಂಗೆಯು ಕೊಡಲು ಆಗನೀ ಒಪ್ಪಿದಿ || ಹಿಂಗವೆ ಎನ್ನೊಡ ತಡೆ ಮಾಡದೆ ನೀ | ಸಂಗಡ ವಿಧ್ವರಿ ಶೇಷವ ಭುಂಜಿಸಿ | ಸಂಕಟ ಪಡುವಂತ ಕಂದಗೆ ಸೂಚಿಸಿ | ಕಂಗೆಡದಂತೆ ಮಾಡಿ ಗಂಗೆಗೆ ಪೋದಿಯು || ೧ || ಎನ್ನಲಿ ಕರುಣಿಸಿ ನಿನ್ನ ಧ್ಯಾನವ ಎನಗೆ ಕೊಡಿಸಿ | ಎನ್ನನು ಪಾವನ ಮಾಡಿ ನಾ ಧನ್ಯನಾಗುವಂತೆ ಮಾಡಿ | ಘನ್ನ ಶ್ರೀ ಸುಧೀಂದ್ರ ಕರ ವರ ಪುತ್ರನೆ | ಮನ್ನಿಸಿ ಪೊರೆದಿಯ ಭಕ್ತ ಪ್ರಹಲ್ಲಾದನೆ | ಎನ್ನಪ ರಾಧವ ನೋಡದೆ ಲಾಲಿಸಿ | ಎನ್ನನು ಕರುಣ ಕಟಾಕ್ಷದಿ ವೀಕ್ಷಿಸಿ | ಇನ್ನಿರು ಎನ್ನಂತರಂಗದಿ ಎಂದೆಂದು | ನಿನ್ಹೊರತನ್ಯರ ಪೊರೆವರನಾಕಾಣೆ || ೨ || ಧರೆಯೊಳು ಮೆರೆಯುವ ಸುಜನ ರಕ್ಷಕ ನೀನು | ತರತರ ವರಗಳ ಕರೆದು ಕೊಡುವಿಯೊ || ಶರಣರ ಪೊರೆವಂತ ಕರುಣಾ ಸಾಗರ ನೀನು | ಶರಣಂಬೆ ನಿನಗಯ್ಯ ನಿನ್ನ ಪಾದಯುಗಳ ಕೈಯ್ಯ | ಎರಡೊಂದು ಗುಣದಲಿ ರಜತವು ಬಿಟ್ಟನೆ | ಎರಡೆರಡೈದೊಂದು ಭಕುತಿಲಿ ನಿರತನೆ | ಮರುತನ ಮತದೊಳು ನಿರತದಿ ಶೋಭಿಪ| ದೊರೆ ತಂದೆ ಪುರಂದರ ವಿಠಲನ ದೂತನೆ ||೩|| ಶ್ರೀ || [ಐತಿಹಾಸಿಕವಿದೆ]

## ೧೨೫ ಪದ—ರಾಗ—ಯದುಕುಲ ಕಾಂಬೋದಿ—ಅಟ್ಟತಾಳ

ಗುರುವೆ ಸಲಹೊ ಎನ್ನ ಶ್ರೀ | ರಾಘವೇಂದ್ರ || ಪಲ್ಲ || ಗುರುವೆ ಸಲಹೊ ಎನ್ನ ಸುಲಲಿತ ಮಹಿಮನೆ| ಚರಣದಲಿ ಬಿದ್ದಿರಗುವೆನಯ್ಯಾ | ಕರೆದು ಮಮತೆಯ ಮಾಡಿ ಪೊರೆಯೊ || ಅನು ಪಲ್ಲ || ಊರು ಊರಿಗೆ ತಿರುಗಿ ಬಳಲಿ ಬೇಸರಗೊಂಡೆ | ಧೀರಾ ನಾ ಸ್ಥಿರವಾಗಿ ಇರುವ ಅನುಕೂಲ ಕಾಣೆ | ಸೇರಿದೇನೊ ನಿನ್ನ ಬೇಡುವೆ ಮುದದಿ ದೂರ ಮಾಡದೆ ಘನ್ನ

ಚಿರಕಾಲ ನೊಂದೆ। ಮಾರನಯ್ಯನ ದಿವ್ಯ ಪಾದ ಕಮಲವ ತೋರಿ ವಿ। ಚಾರದಲ್ಲಿರಿಸೊ ಅವನ ಮರೆಯನೊ ನಿನ್ನಾ। ಪಾರವಾದ ಸಂಸಾರ ಭಾರವ ಪರಿಹರಿಸೊ। ಸುಪ್ರಸನ್ನ ವದನದಿ। ಧಾರು ಣಿಯೊಳು ನಿನ್ನ ಜೋಡಿ ಗಾಣೆನೊ। ಚಾರು ತುಂಗಾ ತೀರವಾಸಾ ॥ ೧॥ ಒಡವರೊಡಿಯ ನಮ್ಮ ಕೃಷ್ಣರಾಯನ ದಾಸ। ಕಡು ದಯಾಕರ ನಿನ್ನ ಅಡಿಗಳಿಗೊಂದಿಪೆ। ದೃಢ. ಭಕುತಿಯ ಬಯಸುವೆ ಇದೊಂದು ವರವ ಬೇಗ। ನೋಡಿ ಪ್ರೇಮದಿ ನಡೆಸುವ ಭಾರ ನಿನ್ನದೊ ಈಗ। ಬಿಡಬಲ್ಲದೊ ಯತಿವರ ನಿನ್ನವನಲ್ಲವೆ। ಕಡಿಯೊ ಎನ್ನ ಪಾಶವ ತರಿದು ದುರಾಶೆಯ। ಮಡದಿ ಮಕ್ಕಳ ಪಡೆದೆ ಭಾಗ್ಯವ। ಒಡಹುಟ್ಟಿದವರ್ಮೇಲ್ ನೆಂಟರಿಂದಲಿ। ಹುಟ್ಟಿಸಲ್ಲದೆ ಸುಖಿಸ ಲಿಲ್ಲವೊ ಬಟ್ಟ ಬಯಲೊಳು ನೇರಿದೆನ್ನಯ ॥ ೨ ॥ ನಾ ಮಾಡಿದಪರಾಧ ಕ್ಷಣಕೆ ನಾವಿರವೈಯ್ಯ। ನೀ ಮಾಡಿದುಪಕಾರಕೆ ಎಣೆಗಾಣೆನೋ। ನಾ ಮಾ ವೈಕುಂಠಪತಿಯ ಸ್ಮರಣೆಯ ನಿತ್ತು ನಾ ಕ್ಷೇಮ ಪೊಂದುವ ದಾರಿಯ ಕರುಣಿಸಿ ತೋರಿ ಪರಂ। ಧಾಮ ರುಕ್ಮಿಣಿ ರಮಣ ಭರಣದಿಂ ಡೊಪ್ಪುತ। ಭಾಮೇರ ಒಡಗೂಡಿ ಎನ ಮುಂದೆ ನಲಿವಂತೆ ಮಾಡೊ। ಸಾಮಾದಿ ವೇದಗಳ ತಂದಿತ್ತಾ ಮಹತ್ಮನ। ತುತಿಸ ಬಲ್ಲನೆ। ಸಾಮಾನ ರಹಿತ ಸನ್ಮತಿಯ ಪಾಲಿಸೋ ತಂದೆ ಪುರಂದರ ವಿಠಲನ ದಾಸ ॥ ೩ ॥

## ಗರುಡವಾಹನ ವಿಠಲ

### ೧೩೬ ಪದ—ರಾಗ—ಧನ್ಯಾಸಿ—ಅಟ್ಟ ತಾಳ

ಯತಿಕುಲ ತಿಲಕ ಶ್ರೀ ರಾಘವೇಂದ್ರರಿಗೆ। ನುತಿಸಿ ಸದ್ಭಕ್ತಿಲಿ ಯರ ಗುವೆನು ॥ ಕ್ಷಿತಿಯೊಳು ಆಶ್ರಿತರಿಗೆ ಕಲ್ಪತರುವಾಗಿ। ಪ್ರತಿ ಕ್ಷಣಕತಿ। ಹಿತವನೀವ ಗುರು ॥ ಪಲ್ಲ ॥ ಹೇಮ ಕಶ್ಯಪ ತಾನು ಭೂಮಿಯೊಳುದು ಭವಿಸಿ। ಭ್ರಾಮಕ ಬುದ್ಧಿಯಿಂದ। ನೇಮಾದಿ ಸರ್ವೇಶಾಯ್ಪ್ರೀಮ ಕೇಶನೆಯೆಂದು ಯಾಮ ಯಾಮಕ ತುತಿಸೆ ॥ ತಾಮಸಮತಿ ಕೇಳಿ ಶ್ರೀ ಮನೋಹರನಾಗ ಪ್ರೇಮಾದಿ ಪ್ರಾರ್ಥಿಸಿ। ಸ್ಥಂಭದಿ ತೋರ್ದ ಹರಿ ಗುರು ॥ ೧ ॥ ಹರಿ ಸರ್ವೋತ್ತಮ ನೆಂದುಚ್ಚರಿಸುತ್ತ ಮೂಲವ ತರದಿ ಪ್ರಹ ಲ್ಲಾದರಿವರು। ಧರಿವ್ಯಾಲೆ ವ್ಯಾಸ ತೀರಥರಾಗಿ ಚರಿಸುತ್ತ। ಮರುತ

ಮತಾಬ್ಧಿಗಿವರು। ಶರಧೀಜನಂತ್ಯೈಭಿವೃದ್ಧಿ ಗೋಸುಗ ವಾಗಿ] ವರ ಚಂದ್ರಿಕಾದಿ ತ್ರಯ ರಚಿಸಿ] ಮೆರದ ಗುರು ॥ ೨ ॥ ರಾಘವೇಂದ್ರ ನೆಂದು ಬಾಗಿ ಬೇಡಲು ದುರಿ] ತೌಘನಾಶನಗೈಯ್ಯುತ। ಭಾಗವತರಿಗನುರಾಗದಿ ಪೊರೆಯುತ್ತ। ಯೋಗ ಮಾರ್ಗವ ತೋರುತ್ತ। ಜಾಗು ಮಾಡದೇ ದೋಷ ನೀಗಿಸಿ ಸಲಹಯ್ಯಾ] ಯೋಗೇಶ ಗರುಡವಾಹನ ವಿಠಲ ದೂತ ॥ ೩ ॥

## ಮೋದ ವಿಠಲ

### ೧೩೭ ಆರ್ಯ—ವೃತ್ತ – ಆದಿ ತಾಳ.

ಮಂತ್ರಾಲಯದೊಳು ನಿಂತಿಹ। ಯತಿವರರೆಂತು ಬಣ್ಣಿಸಲಿ ಎನ್ನಳವೆ। ಯಂತ್ರೋದ್ಧಾರಕ ಪ್ರಾಣ ಪತಿಯೆ ತಾ ನಿಂತು ನುಡಿಸುವನು ಕೇಳ್ಮನವೆ ॥ ಪಲ್ಲ ॥ ಮೂಲ ರಾಮನಾರಾಧಕ ಗುರು ಶ್ರೀಲೋಲನ ಸನ್ನಿಧಿವುಳ್ಳವರು] ಕಾಲ ವಿಚಾರದಲಿ ಜಪಗಳ ಮಾಳ್ಪರು। ಸ್ಥೂಲರ ಕಣ್ಣಿಗೆ ಕಾಣಿಸರು ॥ ೧ ॥ ಮಧ್ವಮತಾಬ್ಧಿಗೆ ಚಂದ್ರಮರಿವರು] ಅದ್ವೈತರಿಗೆದೆಗಿಚ್ಚಹರು] ಶುದ್ಧ ಪದ್ಧತಿಯು ತಪ್ಪಲಿಗೊಡದೆ। ಈ ಧರಿ ಸುಜನರ ಸಲಹುವರು ॥ ೨ ॥ ಪರಿಮಳ ಗ್ರಂಥದಿ ಪಾರಂಗತರಿವ। ರರವಿದೂರನಿಗೆ ಅತಿ ಪ್ರಿಯರು ॥ ಸರುವದ ಶ್ರೀಶನ ಅರ್ಚಿಸಿ ಮೆಚ್ಚಿಪ। ಗರುವಿಕೆಯಲಿ ತಾವಿರುತಿಹರು ॥ ೩ ॥ ಕೃತಯುಗದಲಿ ತಾಹುತವಹಗುಣಿಸಿದ। ಸು ತಪದ ಸ್ಥಳವೆಂಥರುಷವಲಿ। ಸಥಿಯಿಂವಲಿ ಈ ಮತಿವಂತರು। ಶಾಶ್ವತವಾಗಿರುವರೀ ಕ್ಷೇತ್ರದಲಿ ॥ ೪ ॥ ಪ್ರತಿ ಪ್ರತಿವತ್ಸರ ಶ್ರಾವಣಮಾಸದಿ। ತೃತಿಯ (ದ್ವಿತಿಯ) ಕೃಷ್ಣಸು ಪಕ್ಷದಲಿ। ಮಿತಿ ಇಲ್ಲದೆ ಜನ ಬಂದು ಪೂಜಿಸಾದ್ಭುತ ಮಹಿಮೆಂತೆಂತೊರ್ಣಿಸಲಿ ॥೫॥ ಸಂತರು ಬಹುಜನ ನಿಂತು ನರ್ಚಿಸುತ] ಅಂತ ರಂಗದಲಿ ಶ್ರೀ ಹರಿಯಾ ॥ ತಂತು ನಾವರಿಯೆವು। ಎಂತೊಲಿದಿಹ ನಿವರಂತು ಬಲ್ಲವರು ಆರಯ್ಯಾ ॥ ೬ ॥ ಸರ್ವತೀರ್ಥಗಳು ಸರ್ವಕ್ಷೇತ್ರಗಳು] ಸರ್ವ ದೇವತೆಗಳು ಸನ್ನಿಧರು ॥ ಸರ್ವಜ್ಞರು ತಾವ ಪೂರ್ಣವ ಮಾಡಿಸಿ। ಶರ್ವವಂದ್ಯನ ಕೂಡಿರುತಿಹರು ॥೭॥ ಅದಕಾರಣ ಈ ಯಾತ್ರಿಯೆ ಮುಖ್ಯವು। ಸದಮಲರಾಗಿ ಪೋಗುವರಾ ॥

ಬದಿಯುಲಿದ್ದು ಹರಿ ಸದನದ ಸುಖವನು ] ಒದಗಿಸಿ ಬೇಗನೆ ಕೊಡುತಿಹ್ಯರ ॥ ೮ ॥ ಇಂತೀಪರಿಯುಲಿ ಗುರುಗಳ ಮಹಿಮಿಯು ] ಸಂತತ ಕೊಂಡಾಡುವ ಜನರ ॥ ಕಂತುಪಿತಾ ಶ್ರೀ ಮೋದ ವಿಠ್ಠಲನು ] ಅಂತವಿಲ್ಲದೆ ರಕ್ಷಿಪನವರ ॥ ೯ ॥

## ೧೩೮ ಮಂಗಳ ಪದ—ರಾಗ—ಸಾವೇರಿ—ತಾಳ ಆದಿ

ಶ್ರೀ ಮಂತ್ರಾಲಯದಿ ನಿಂತಿಹ್ಯನೆ ಪರಾಕು । ಶ್ರೀಮಂತ ಯತಿಕುಲ ದೀಪ ಪರಾಕು ॥ ಧೀಮಂತ ಜನ ರಮ್ಯನೆ ಪರಾಕು ] ಕಾಮಾಂತಕ ಪ್ರೀಯ ಧೀರ ಪರಾಕೆಂದು ] ನೇಮದಲಾರುತಿಯಾ ಬೆಳಗಿರೆ ॥ ೧ ॥ ಪ್ರಹಲ್ಲಾದ ರಾಜರಾಯರಾರನ್ನ ಪರಾಕು । ಆಲ್ಹಾದ ಮತಿ ಕೊಡುವವರೆ ಪರಾಕು । ಸಹಲ್ಲಾದ ರಾಯ ನಗ್ರಜನೆ ಪರಾಕು । ಕೊಲ್ಹಾಪುರಿ ಪತಿಯಾ ದೂತ ಪರಾಕೆಂದು ಉಲ್ಹಾಸದಿ ಆರುತಿಯಾ ಬೆಳಗಿರೆ ॥ ೨ ॥ ವ್ಯಾಸ ಮುನಿಯಾಗಿ ದೇಶ ವಾಳ್ದ ಪರಾಕು ] ಕಾಶಿ ಗದಾಧರರ ಜೈಸಿದನೆ ಪರಾಕು ] ವ್ಯಾಸ ಸಮುದ್ರ ನಿರ್ಮಿಸಿದರೆ ಪರಾಕು । ಭಾಸುರ ಕೀರ್ತಿಯು ಪಡೆದ ಧೀರ ಪರಾಕೆಂದು । ಮಿಾಸಲದಾರುತಿಯಾ ಬೆಳಗಿರೆ ॥ ೩ ॥ ವಿದ್ಯಾವಂತರ ಗುರುರಾಯ ಪರಾಕು ] ಸದ್ವೈಷ್ಣವ ಶಿರೋಮಣಿಯೆ ಪರಾಕು । ಬದ್ಧ ಭವಾಬ್ಧಿ ಪೋತರೆ ಪರಾಕು । ಮಧ್ವವಲ್ಲಭರಾಮ ವ್ಯಾಸ ಪರಾಕೆಂದು ಸಿದ್ಧರಾರುತಿಯಾ ಬೆಳಗಿರೆ ॥೪॥ *ಕಾಷಾಯುಕ ಮಂಡುಲ ಧರ ಪರಾಕು । ಶೇಷಾಂಶರಾದ ನಮ್ಮ ಗುರುವೆ ಪರಾಕು ॥ ಸಾಸಿರ ನಾಮಕ ಸನ್ನಿಹಿತ ಪರಾಕು ] ದೋಷ ಕಳೆವ ವಿಶೇಷ ಮಹಿಮನೆಂದು ] ದಾಸಿಯರಾರುತಿಯಾ ಬೆಳಗಿರೆ ॥ ೬ ॥ ಮೋದ ವಿಠ್ಠಲಗತಿ ಪ್ರೀತ ಪರಾಕು ಸಾದದಲಿ ಸುಖಿಸುವರೆ ಪರಾಕು ॥ ಮೋದ ತೀರ್ಥಾಬ್ಧಿ ಮತ ಮಿಾನ ಪರಾಕು ] ಭೇದ ಬಲ್ಲಂಥ ರಾಘವೇಂದ್ರ ಗುರುವೆ ಯೆಂದು ] ಆದರದಿಂದಾರುತಿಯು ಬೆಳಗಿರೆ ॥ ೬ ॥

* ನುಡಿ (೫) ಮೂಲಪ್ರತಿಹಳೆ ಕಾಗದವು ಹರಿದಿದೆ.

## ವರದೇಶ ವಿಠ್ಠಲ

### ೧೩೯ ಪದ—ರಾಗ—ತಾಳ ತ್ರಿವಿಡಿ.

[ ಕಣ್ಣಾರೆ ಕಂಡೆನಚ್ಯುತನಾ ಎಂಬ ಧಾಟಿ ]

ವಿನಯದಿಂದಲಿ ನಮಿಸುವೆನಾ | ವೃಂದಾ | ವನದಿ ರಾಜಿಪ ರಾಘವೇಂದ್ರ ಗುರುವಿನ || ಪಲ್ಲ || ದುರಿತ ವಾರಣ ಪಂಚಾನನ | ನರಹರಿ ರೂಪ ಕಂಭದಿ ಪ್ರಕಟ ಗೈಸಿದನ | ಹರಿಭಕ್ತಾಗ್ರಣಿ ಎಂದೆನಿಪನ | ನಾರದರ ಉಪದೇಶ ಗರ್ಭದಿ ಕೈಕೊಂಡಿಹ್ಯನ || ೧ || ಸಿರಿ ವ್ಯಾಸ ತೀರ್ಥರೆನಿಪನ | ಪುರಂದರ ದಾಸಾರ್ಯರಿ ಗುಪದೇಶ ಗೈದರನ | ವರ ಚಂದ್ರಿಕ ರಚಿಸಿದನ | ದುಷ್ಟ | ಪರಮತಾದ್ರಿಗಳಿಗೆ ಕುಲಿಶನೆನಿಪನ || ೨ || ಶ್ರೀ ಸುಧೀಂದ್ರಕರಾಬ್ಜ ಜನ | ದಿವ್ಯ ಭಾಸುರ ಪರಿಮಳ ಗ್ರಂಥ ಕರ್ತರನ || ವಿಮಲ ಮನದಿ ಭಜಿಪರನ | ದೋಷನಾಶನಗೈಸಿ ಪೋಷಿಸುವ ಶಕ್ತರನ || ೩ || ಪರಮಂತ್ರ ಸದ್ಮ ಸಿಲಯನ | ಶ್ರೀ ಗುರು ಮಧ್ವಮತ ಧುರಂಧರನೆನಿಸುವನ || ಹರಿಯ ಪ್ರೀತಿಗೆ ಪೂರ್ಣ ಪಾತ್ರನ | ಈ ಧರೆಯೊಳು ಬಹು ಪರಿ ಮೆರೆವ ಮುನಿಪನ || ೪ || ತುಂಗಾಭದ್ರ ತೀರವಾಸನ | ಶುಭ | ಮಂಗಳ ಚರಿತ ಕಮಂಡುಲ ಧರನ || ರಂಗ ವರವೇಶ ವಿಠ್ಠಲನ | ಪಾದ | ಭೃಂಗ ಯತಿಕುಲ ಕಂಜಾರ್ಕ ಸನ್ನಿಭನ || ೫ ||

## ಇಂದಿರೇಶ

### ೧೪೦ ಪದ—ರಾಗ—ಭೈರವಿ—ಝಂಪಿ ತಾಳ

ಮಂಗಳಂ | ಜಯ ಮಂಗಳಂ || ಪ || ಕೂರ್ಮಾಸನದೊಳಗೆ ಕೂತವಗೆ | ನಾರದ ಮುಖವನು ನೋಡುವವಗೆ | ನಾರಸಿಂಹನ ಪಾದ | ವಾರಿಜವವನು ನಿಜ | ಚಾರು ಶರೀರದೊಳಿಟ್ಟ್ಯಾರಾಧಿಪಗೆ || ೧ || ದಂಡ ಕಮಂಡುಲ ಭೂಷಿತಗೆ || ಹಿಂಡು ಶಿಷ್ಯರ ಮಧ್ಯ ಕುಳಿತು ಜಯೇಶ್ವರ ಆ | ಖಂಡ ಬೋಧರ ಶಾಸ್ತ್ರ ಪೇಳುವಗೆ || ೨ || ಮಂದಗಮನೆ ಪದ ಕೇಳಿದವಗೆ | ತಂದ ಮಂತ್ರಾಕ್ಷತಿ ಕೊಟ್ಟವಗೆ | ಇಂದಿರೇಶನ ಪದ ಪಾಡುವರನೆ ಕಂಡು ಬಂದು ಮೋದಿಪ ಯತಿ ರಾಯಗೆ || ೩ ||

**ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು.**

## ಶ್ರೀ ರಾಘವೇಂದ್ರರ ವೃಂದಾವನ ವಿಷಯ ಐತಿಹಾಸಿಕ

ಶ್ರೀ ರಾಘವೇಂದ್ರರಾಯರು ಪರಂಧಾಮಕ್ಕೆ ಹೋದದಿವಸ ಸಾವಿರದ ಐನೂರಾ ತೊಂಭತ್ತು ಮೂರು ೧೫೯೩ನೆಯ ವಿರೋಧಿಕೃತ ನಾಮ ಸಂ || ಶ್ರಾವಣ ಬ|| ೨ ಶುಕ್ರವಾರವು. ಆಕಾಲದಲ್ಲಿ ಮಹಾರಾಜೆ, ಶ್ರೀ ಆದವಾನಿ ಸೀಮಿಸರ ದೇಸಾಯಿ, ವೆಂಕಂಣಪಂತ ವ್ಯಣ್ಕ್ಯಯ ವೃಂದಾವನಕ್ಕೆ ೧೨೦೦೦ ಸಾವಿರ ವರಹಾ, ಕನಕಾಭಿಷೇಕ ಮಾಡಿಸಿ, ಬ್ರಾಹ್ಮರಿಗೆ ಕೊಟ್ಟು ವರುಷದ ಸಮಾರಾಧನಿ ಮಾಡಿಸಿದನು. ಇದಲ್ಲದೆ ೨೨೦೦೦ ಸಾವಿ ವರಹಾ ಕೊಟ್ಟು ಗಂಡಿಕಾನದಿಯಿಂದ ೧೨೦೦೦ ಸಾವಿರ ಸಾಲಿಗ್ರಾಮ ತ ಸಿದನು ಇದರೊಳಗೆ ೧೨೦೦ ವಳ್ಳೀ ಲಕ್ಷ್ಮೀ ನಾರಾಯಣ ಸಾಲಗ್ರಾಮ ಶಿಲಾಮಯ ವೃಂದಾವನ ಮಾಡಿಸಿ, ಆದರ ಒಳಗ ತಾಮ್ರ ಸಂಪುಟ ಮಾಡಿ, ಸಾಲಗ್ರಾಮ ಇದರೊಳಗ ಇಟ್ಟು ಸ್ಥಾಪಿಸಿ ಬಿಡೊ ಅಂಥಾವನಾ ದನು ] ಈ ವೃಂದಾವನ ಪೂಜಿ ತಮ್ಮ ಪುರೋಹಿತ ತಿಮ್ಮಣ್ಣ ಭಟ್ಟರಿ ಕೊಡೊ ಅಂಥಾವನಾದಾ । ಇವರ ಪೂಜಿಗೆ ದಾರು ವಿಘ್ನ ಮಾಡತಾರೊ ಅವರಿಗೆ ಫಲದಾವದು ಎಂದರೆ ಗೃಹಸ್ಥರು ಮಾಡಿದರೆ ಅವರಿಗೆ ತಮ್ಮ ಮಾತಾಪಿತೃಗಳು ಕಾಶಿಯಲ್ಲಿ ವಧೆ ಮಾಡಿದ ಫಲ ಬರಲಿ. ಸಂಸ್ಥಾ ಸ್ವಾಮಿಗಳು ಮಾಡಿದರೆ ಸರ್ವಜ್ಞರಾಯರು ಮೊದಲು ಮಾಡಿ ತಮ್ಮ ಗುರುಗಳ ಪರಿಯಂತ ದ್ರೋಹಮಾಡಿದ ಫಲ ಬರಲಿ. ಮ್ಲೇಂಛರು ಮಾಡಿ ದರೆ ಮಸೂತಿ ವಳಗೆ ಹಂದಿಕೊಯಿದ ಫಲಬರ್ಲಿ ನನ್ನ ವಂಶದವರು ಮಾಡಿದರೆ. ನನ್ನ ದ್ರೋಹ ಮಾಡಿದ ಫಲಬರ್ಲಿ ] ಎಂದು ನಿರ್ಣಯ ಮಾಡಿ ಪುರೋಹಿತರಿಗೆ, ಕಾಗದ ಬರೆದು ಕೊಟ್ಟನು.

ಈ ಬರಹ ವೇಣಿ ಸೋಮಪುರ ಗೋಪಾಲದಾಸ ರಾಯರ ಹಳೆಯ ಪುಸ್ತಕ ಸುಮಾರು ೨೦೦ ವರ್ಷದ ಹಿಂದೆ ಬರದು ಇದೆ. ಇಂದು ಈ ವಿಷ ಯವು ಸಜ್ಜನರ ಮುಂದಿರಿಸಿದೆ. ತಜ್ಞರು ವಿಚಾರ ಮಾಡಬೇಕ್ಕದ್ದು.

ಸಂಪಾದಕ.

## ತ್ವರೆಮಾಡಿರಿ ! — ಶ್ರೀಹರಿದಾಸ ಸಾಹಿತ್ಯ ಸುಗ್ಗಿ — ತ್ವರೆಮಾಡಿರಿ !!

| ನಮ್ಮಲ್ಲಿ ದೊರೆಯುವ ಪುಸ್ತಕಗಳು. | ರೂ. ಆ. ಪೈ. |
|---|---|
| ೧-೨ ಶ್ರೀ ಪುರಂದರದಾಸರು ಮತ್ತು ಹರಿದಾಸ ಪರಂಪರೆ | ೧—೦—೦ |
| ೩ ತಾರತಮ್ಯಸಾರ ( ಸುಳಾದಿಗಳು ) .... .... | ೧—೮—೦ |
| ೪ ಶ್ರೀ ವಿಜಯ ದಾಸರ ಪ್ರಾರ್ಥನಾ ಭಾಗ (ಸುಳಾದಿ) | ೨—೦—೦ |
| ೫ ಸೃಷ್ಟಿ ಪ್ರಕರಣ ಸುಳಾದಿಗಳು ತಾತ್ಪರ್ಯಸಹಿತ .... | ೩—೦—೦ |
| ೬ ಶ್ರೀ ರಾಘವೇಂದ್ರ ಗುರುಸಾರ್ವಭೌಮ .... .... ( ಅಪರೋಕ್ಷಜ್ಞಾನಿಗಳಿಂದ ರಚಿತವಾದ ೧೩೪ ಪದ ೬ ಸುಳಾದಿ ಸ್ತೋತ್ರಗಳು ) | ೧—೪—೦ |
| ೧೫ ಪುಸ್ತಕ ಸಟ್ಟು ಶ್ರೀಪ್ರಾಣೇಶವಿಠಲ ಕೀರ್ತನಮಾಲಿಕೆ | ೫—೦—೦ |
| ಅಣುಮಧ್ವ ವಿಜಯ ಮೂಲ ಮತ್ತು ಭಾವಿಸಿ .... | ೫—೦—೦ |
| ಮಧ್ವ ವಿಜಯ ಮೂಲ, ಭಾವಿಸಿ ಭಾವಾರ್ಥ ೪, ೫, ೬ ಭಾಗ ಟೈಟಲ್ ಕವರು ಸಹ ಭಾಗ ೧, ೨, ೩ ಆಗಿವೆ ಟಪಾಲ ವೆಚ್ಚ ಬೇರೆ. | ೩—೮—೦ |

ಮುಂದೆ ಸರಿಯಾಗಿ ಶ್ರೀವಿಜಯದಾಸಾರ್ಯರ ೧. ತೀರ್ಥಕ್ಷೇತ್ರ ಮಹಿಮಾಪದ ಸುಳಾದಿ ೨. ಸಾಧನಭಾಗ ಸುಳಾದಿ ೩. ಪ್ರಮೇಯ ಉಪಾಸನಾಭಾಗ ಸುಳಾದಿ ೪. ಸ್ತೋತ್ರಭಾಗ, ಇತರ ದಾಸಾರ್ಯರ ಸುಳಾದಿಗಳು ೫ ಭಾಗವಲ್ಲಿ ಅಚ್ಚಾಗುವವು. ಅಲ್ಲದೆ ಈಸುಳಾದಿಗಳ ಅಚ್ಚು ಮುಗಿದನಂತರ ಕ್ರಮವಾಗಿ ಎಲ್ಲ ಪದಗಳುಅಚ್ಚಾಗುವವು. ಎಲ್ಲ ದಾಸವರ್ಯರ ಸ್ತೋತ್ರ ಪದಗಳು ಮತ್ತು ಮಠದ ಸ್ವಾಮಿಗಳ ಸ್ತೋತ್ರ ಪದಗಳು ಅಚ್ಚಾಗುತ್ತವೆ.

ಮತ್ತು ಶ್ರಾವಣ ಶು|| ೧೫ ಯಿಂದ ಹರಿದಾಸ ಸಾಹಿತ್ಯಮಾಲೆ ಗದ್ಯರೂಪವಾಗಿ ವರ್ಷದಲ್ಲಿ ೬ ಪುಸ್ತಕ ಕ್ರೌನ್ ಸೈಜು ೬೦೦ ರಿಂದ ೭೦೦ ಪುಟದವರೆಗೆ ಪ್ರಕಟಗೊಳಿಸಲಾಗುತ್ತದೆ. ವಾರ್ಷಿಕ ಚಂದಾ ರೂ|| ೬ ಅಂಚೆವೆಚ್ಚ ೧೦ ಆಣೆ. ರಜಿಸ್ಟರಿನಿಂದ ತರಿಸಿಕೆವಳ್ಳುವವರಿಗೆ ಪ್ರತಿ ಯೊಂದಕ್ಕೆ ೪ ಆಣೆ.

**ಹನುಮಂತರಾವ ವಕೀಲ, ಗೊರಬಾಳ, ಸಂಚಾಲಕ.**

ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸೂಗೂರ.

ಚಂದ್ರಗುಪ್ತ ಮುದ್ರಣಾಲಯ, ಅಫ್ಜಲ್‌ಗಂಜ್ ಹೈದ್ರಾಬಾದ ಪಟ್ಟಣ.